ಸಂಪಾದಕರು ಮತ್ತು ಪ್ರಕಾಶಕರು :
ಡಿ. ಸಿ. ಚಿತ್ತಾಳ ಬಿ. ಎ., ಎಲ್ ಎಲ್. ಬಿ.
ಪರ್ಣಕುಟಿ ಗ್ರಂಥಮಾಲೆ
ಧಾರವಾಡ

ಜನೆವರಿ ೧೯೫೨


ಬೆಲೆ : ಒಂದು ರೂಪಾಯಿ

ಮುದ್ರಕರು :
ಎಸ್. ಎಮ್. ಕುಲಕರ್ಣಿ
ಲಲಿತ ಮುದ್ರಣಾಲಯ
ಧಾರವಾಡ

ಈ ಸಂಗ್ರಹದಲ್ಲಿ ಕೆಲವು ಕತೆಗಳೂ ಕೆಲವು ಜೀವನ ಚಿತ್ರಗಳೂ ಸೇರಿವೆ. ಕತೆಗಳಲ್ಲಿ ಬಹಳಷ್ಟು ‘ ಪೆದ್ದಂಕತೆ ’ ಗಳು.

ಇವುಗಳನ್ನೋದಿದ ಮಿತ್ರರೊಬ್ಬರು “ ಅದು ಹಾಗಿದ್ದರೆ, ಇದು ಹೀಗಾಗಿದ್ದರೆ, ಆ ಪಾತ್ರ ಈ ರೀತಿ ಬೆಳೆದಿದ್ದರೆ....ರೆ....ರೆ ” ಎಂದೆಲ್ಲ ಸೂಚಿಸಿದರು. ನಾನು ಅವರ ಸೂಚನೆಯಂತೆ ಇವುಗಳನ್ನು ತಿದ್ದಿದ್ದರೆ ಒಳಿತಾಗುತ್ತಿತ್ತೇನೋ. ಆದರೆ ಇವು ಹೀಗೇ ಇರಬೇಕೆಂದು ಈ ರೀತಿ ಬರೆದ ನನಗೆ ತೋರಿದ್ದರಿಂದ, ಯಾವ ಬದಲಾವಣೆಯನ್ನೂ ಮಾಡಲಿಲ್ಲ. ಇಲ್ಲಿಯ ದೋಷಗಳ ಅರಿವು ನನಗಿದೆ. ದೋಷಗಳನ್ನೇ ಗುಣಗಳೆಂದು ನಂಬುವ ‘ ಪೆದ್ದಂತನ ’ ನನ್ನಲ್ಲಿಲ್ಲವೆಂದು ನನ್ನ ಭಾವನೆ. ಇಂಥವೂ ಇರಲಿ ಎಂದು ಪ್ರಕಟಿಸುವ ಸಾಹಸ ಮಾಡಿದ್ದೇನೆ.

ಧಾರವಾಡ
೭–೧–೫೨

ವಿ. ಜಿ. ಭಟ್ಟ

# ಪ ರಿ ವಿ ಡಿ

ಪುಟ

# ಮುದಿ ಕಪ್ಪೆ

ಅಡಿಗೆಯ ಮನೆಯಿಂದ ಉಮೆಯು ಓಡಿ ಬಂದು "ನೀರಿನ ಕೊಡದ ಬಳಿಗೆ ಒಂದು ಕಪ್ಪೆ ಕುಳಿತಿದೆ. ಹೊರಗೆ ಹಾಕಿ ಕೊಡಿ" ಅಂದಳು. ತನಗೆ ಹೆದರದವಳು ಒಂದು ಕಪ್ಪೆಗೆ ಅಂಜುತ್ತಾಳಲ್ಲ ಅಂದುಕೊಂಡು ಉಮೇಶ ಒಳಗೆ ಬಂದ.

ಕಪ್ಪೆಯು ಭದ್ರಾಸನ ಹಾಕಿತ್ತು. ಉಮೇಶ ಒಂದು ಸೌದೆಯಿಂದ ಕೊಡವನ್ನು ಕುಟ್ಟಿದ. ಕಪ್ಪೆ ಕದಲಲಿಲ್ಲ. ಅವನ ಹೆಂಡತಿಯೇ ಅವನಿಗೆ ಹೆದರುವದಿಲ್ಲ, ಅಂದ ಮೇಲೆ ಕಪ್ಪೆ ಬೆದರುತ್ತದೆಯೇ? ಕಪ್ಪೆಗೇ ಹೊಡೆಯಲು ಅವನ ಮನಸ್ಸಾಗಲಿಲ್ಲ. "ಕಪ್ಪೆಯನ್ನೋಡಿಸಲು ಹಿಂದೆ ಮುಂದೆ ನೋಡುವವರು ಯುದ್ಧಗಿದ್ಧಕ್ಕೆ ಹೋದರೆ...." ಎಂದು ಉಮೆ ಚುಚ್ಚಿದಳು. ತನಗೆ ಕಪ್ಪೆಯನ್ನೋಡಿಸುವ ಧೈರ್ಯವೂ ಇಲ್ಲವೆಂದು ಮಡದಿ ತೀರ್ಮಾನಿಸಿಕೊಂಡಳಲ್ಲ ಎಂದು ಉಮೇಶನಿಗೆ ನಾಚಿಕೆಯಾಯಿತು. ಆದರೆ ಅವನ ಸಂಕಟ ಅವಳಿಗೆಲ್ಲಿ ತಿಳಿಯಬೇಕು? ಕುರುಕ್ಷೇತ್ರದಲ್ಲಿ ಬಿಲ್ಲು ಬಾಣ ಬಿಸಾಡಿ ನಿಂತ ಅರ್ಜುನನಂತಾಗಿದ್ದ ಉಮೇಶ. ಅವನ ತಲೆತುಂಬ ವಿಚಾರ.

ಪಾಪ, ಈ ಕಪ್ಪೆ ಕಚ್ಚುವದಿಲ್ಲ. ಏನೂ ಕದ್ದು ತಿನ್ನುವದಿಲ್ಲ. ಸುಮ್ಮನೆ—ನೀರಿನ ತಂಪಿಗಾಗಿ—ಕೊಡದ ಬಳಿಗೆ ಕುಳಿತಿದೆ. ಹೊಡೆದರೆ ಸಾಯುವದು. ನನ್ನ ಮೇಲೆ ತಿರುಗಿ ಬೀಳುವ ಪಾಶ್ವೀವೃತ್ತಿಯದಲ್ಲ. ಇಂಥ ಪ್ರಾಣಿಯನ್ನು ಓಡಿಸಬೇಕೇ? ಏಕೆ? ನನ್ನ ಮನೆಯೊಳಗೆ ಬಂದಿತೆಂದೇ? ಹೆಂಡತಿ ಹೇಳುತ್ತಾಳೆಂದೇ? ನನಗೆ ಈ ಕಪ್ಪೆಯನ್ನು ಹೊಡೆಯಲು ಯಾವ ಅಧಿಕಾರವಿದೆ? ನನ್ನ ಮನೆಯೊಳಗೆ ಬಂದಿತೆಂದು....ನಿಜ. ಆದರೆ ಈ ಮನೆ

ನನ್ನನು ಎಷ್ಟರ ಮಟ್ಟಿಗೆ ? ಬಾಡಿಗೆ ಕೊಟ್ಟು ಬಿಟ್ಟರೆ ಮನೆ ನನ್ನದಾಗಲಿಲ್ಲ. ನಾಳೆ ಮಾಲಿಕನು ಬಂದು ಹೊರಡಿರಿ ಎಂದರೆ ನಾನು—ನಾವು— ಕಪ್ಪೆಯಂತೆ ಕುಳಿತುಕೊಳ್ಳುತ್ತೇವೆ ! ಇನ್ನು ನಾನು....ಎಂದರೆ ಹತ್ತುವರುಷಗಳ ಹಿಂದೆ ವಿದ್ಯಾರ್ಥಿಯಾಗಿದ್ದಾಗ ಎಲ್ಲಿಯೋ ಹೇಗೋ ದಿನ ಕಳೆಯುತ್ತಿದ್ದಾಗ—ಜ್ವರ ಬಂದು ನರಳುತ್ತಿದ್ದಾಗ— ಈ ಕಪ್ಪೆಯಂತೆ ಒಂದು ಮೂಲೆಯಲ್ಲಿ ಬಿಟ್ಟಿದ್ದಾಗ— ಯಾರೋ ತಾಯಿಯಂತೆ ಆರೈಕೆಮಾಡಿ ಬದುಕಿಸದಿದ್ದರೆ....

"ಬೇಗ ಓಡಿಸಿ ಅಂದ್ರೆ" ಎಂದು ಉಮೆಯು ತನ್ನ 'ಗೀತೆ'ಯನ್ನು ನುಡಿದಳು. ಉಮೇಶನು ತನ್ನ ಹತ್ತರ ಸಾಧ್ಯವಿಲ್ಲವೆಂದು ಸೌದೆಯನ್ನು ಬಿಸಾಡಿ ಕೋಣೆಯೊಳಗೆ ನಡೆದನು. ಅವಳು ನಕ್ಕು, ತನ್ನ ಅತ್ತೆಯನ್ನು ಕರೆದು ಹೇಳಿ ಚೇಷ್ಟೆ ಮಾಡಿದಳು. "ಕಲಿತವರೆಲ್ಲಾ ಹೀಗೇ. ಪುಕ್ಕರು. ಕಪ್ಪೆ ಓಡಿಸಲಿಕ್ಕೂ ಬರುವದಿಲ್ಲ !" ಎಂದು ಅತ್ತೆಸೊಸೆಯರಿಬ್ಬರೂ ಕೂಡಿ ಟೀಕಿಸಿದರು. ಉಮೇಶ ಕೇಳಿಯೂ ಕೇಳದವನಂತೆ ಮಲಗಿದ.

ಹೊರಗೆ ಮಲಗಿದ ಆಳನ್ನು ಕರೆದು ಒಂದೇ ನಿಮಿಷದೊಳಗೆ ಓಡಿಸಿ ಬಂದು ಗಂಡನಿಗೆ "ನಿಮ್ಮ ಹತ್ತರ ಆಗದಿದ್ದರೇನು ? ಸುಬ್ಬ ಒಂದೇ ಪೆಟ್ಟಿಗೆ ಓಡಿಸಿಬಿಟ್ಟ. ಓಹೋ !" ಅಂದಳು ಉಮೆ.

ಉಮೇಶನಿಗೆ ನಿದ್ದೆಯೇ ಹತ್ತಲಿಲ್ಲ. ತಾನು ಹೇಡಿಯೇ ? ಎಂದು ತನ್ನನ್ನೇ ಕೇಳಿಕೊಂಡ. ಹೇಡಿಯಾಗಿದ್ದರೆ ದಾರಿದ್ರ್ಯದ ದಿನಗಳನ್ನು ದಾಟಿ ಊರೂರಲೆದು ಕಲಿಯಲು ಸಮರ್ಥನಾಗುತ್ತಿದ್ದಿಲ್ಲ. ಆದರೆ ಸಾಹಸಕ್ಕೂ ಕಪ್ಪೆಯನ್ನು ಹೊಡೆದೋಡಿಸುವದಕ್ಕೂ ಯಾವ ಸಂಬಂಧ ? ಈ ಕೆಲಸದಲ್ಲಿ ಹೇಡಿಯೇ ಆದೆ. ಆಗಲಿ. ಅಡ್ಡಿಯಿಲ್ಲ. ಆದರೆ ಹೆಂಡತಿಯೂ ಚೇಷ್ಟೆ ಮಾಡುವಂತಾಯಿತಲ್ಲ.

ಬದಿಗೆ ಉಮೆಯು ನಿದ್ದೆಹೋಗಿದ್ದಳು. ಉಮೇಶನು ಎದ್ದು ಆ ಕಪ್ಪೆಯನ್ನು ಹೊರಗೆ ಹಾಕಿ ಮುಚ್ಚಿದ ಬಾಗಿಲನ್ನೇ ತೆರೆದ. ಬೇಟ್ರಿ ಹಿಡಿದು ನೋಡಿದ. ಅಲ್ಲೇ ಇತ್ತು ಆ ಮುದಿಕಪ್ಪೆ ! ಅದು ಉಬ್ಬಸಬಿಡುವದೂ ಅವನಿಗೆ ಕಂಡಿತು. ಅದಕ್ಕೆ ಮಾತಾಡಲು ಬರುತ್ತಿದ್ದರೆ ಏನೆಲ್ಲ ಹೇಳುತ್ತಿತ್ತೋ! ಉಮೇಶ ಏನೇನು ಹೇಳುತ್ತಿದ್ದನೋ! ಒಂದೆರಡು ನಿಮಿಷ ಅವನು ಏನೋ ವಿಚಾರಿಸಿದ. ಮೂರು ನಾಲ್ಕು ಸಲ ಬೇಟ್ರಿಯ ಬೆಳಕು ಬಿಟ್ಟು ನೋಡಿದ.

ಕೊನೆಗೆ ಒಂದು ತಂಬಿಗೆ ನೀರು ತಂದು ಅದರ ಬಳಿಗೆ ಸುರಿದು ಬಾಗಿಲ ಹಾಕಿಕೊಂಡು ಬಂದ.

"ಎಲ್ಲಿಗೆ ಹೋಗಿದ್ದಿರಿ ?" ಉಮೆಗೆ ಎಚ್ಚರವಾಗಿಬಿಟ್ಟಿತ್ತು !

"ನಿತ್ಯದಂತೆ ಹೊರಗೆ ಹೋಗಿದ್ದೆ" ಎಂದು ಮಲಗಿದ. ಅವನಿಗೆ ಹಿಂದಿನ ದಾರಿದ್ರ್ಯವೆಲ್ಲ ನೆನಪಾಗಿ ಕನಸಿನಲ್ಲಿಯೂ ತೋರಿಸಿಕೊಂಡವು. ಹೀಗೆ ಸ್ಮೃತಿ ಪಟಲವನ್ನು ತಟ್ಟಿದವರು ಯಾರು ? ಮುದಿಕಪ್ಪೆಯೋ ಮಡದಿಯೋ ಎಂಬುದು ಮಾತ್ರ ಅವನಿಗೆ ತಿಳಿಯಲಿಲ್ಲ.

---

# ಚೆಲುವು-ಬಲವು !

ಕೊನೆಗೊಮ್ಮೆ ಶಂಕರ ಹೂಂಗುಟ್ಟಲೇಬೇಕಾಯಿತು. “ ಹುಡುಗಿ ಮನಸ್ಸಿಗೆ ಬಂದರೆ ಮಾತ್ರ ಆಗಿ. ಈ ವಿಷಯದಲ್ಲಿ ಒತ್ತಾಯಮಾಡಬರುತ್ತ ದೆಯೋ ? ” ಎಂದು ಶಿವರಾಮ ಹೆಗಡೆಯವರು ಶಂಕರನನ್ನು ಹೊರಡಿಸಿದರು.

ದಾರಿಯುದ್ದಕ್ಕೂ ಹೆಗಡೆಯವರು ತಮ್ಮ ಮಗಳ ಗುಣಗಾನವನ್ನು ಪ್ರಸ್ತುತ ಅಪ್ರಸ್ತುತ ಪ್ರಶಂಸೆಗಳಿಂದ ಮಾಡಿ ಅವಳ ಜಾತಕದಲ್ಲಿರುವ ಯೋಗಾವಳಿಗಳನ್ನು ಬಣ್ಣಿಸಿದರು. ಶಂಕರ ಹೂಂಗುಡುತ್ತ ಸಾಗಿದ. ಹೆಗಡೆ ಯವರ ಕೆಲವು ಮಾತುಗಳಿಗೆ ‘ ಹುಂ ’ ಒಂದರಿಂದಲೇ ಪಾರಾಗಲು ಅವನಿ ಗಾಗಲಿಲ್ಲ. “ ನಾನು ಹೇಳುವದು ಸರಿಯೋ ಅಲ್ಲವೋ ? ಹೇಳಿ. ತಪ್ಪಾದರೆ ಸರಿಪಡಿಸಿಕೊಳ್ಳುತ್ತೇನೆ ” ಎಂದು ತಮ್ಮ ತಪ್ಪು ಒಪ್ಪಿಕೊಳ್ಳುವ ಗುಣವನ್ನು ದೊಡ್ಡದು ಮಾಡಿ ತೋರಿಸಿದಾಗ “ಹೌದು” ಎಂಬೊಂದು ಶಬ್ದವನ್ನು ಶಂಕರ ಆಡಲೇಬೇಕಾಯಿತು.

ಕೇರಿಯ ಅಂಗಳಗಳನ್ನು ಹಾಯ್ದು ಹೆಗಡೆಯವರ ಮನೆಗೆ ಹೋಗ ಬೇಕು. ರಸ್ತೆಯಿಂದಲೇ ಹೋಗಲು ಬರುತ್ತಿದ್ದರೂ ತಮ್ಮ ಭಾವೀ ಅಳಿಯ ನನ್ನು ಕೇರಿಯ ‘ ಗ್ರಾಸ್ತ ’ ರ ದೃಷ್ಟಿಗೆ ಹಾಕಿ, ಅವರ ಕಣ್ಣು ಕುಕ್ಕಿಸಿ ತಮ್ಮ ದೊಡ್ಡಸ್ತನವನ್ನು ಮೆರೆಯಿಸುವ ಹುಮ್ಮಸದಿಂದ ಅಂಗಳಗಳನ್ನೇ ದಾಟುತ್ತ ನಡೆದರು. ಕೆಲವು ಗ್ರಾಸ್ತರಿಗೆ “ ನಾನು ಹೇಳುತ್ತಿದ್ದ ಶಂಕರಭಟ್ಟರು ಇವರೆ. ಬಿ. ಎ. ಆಯಿತು. ” ಎಂದು ಹೋಗುತ್ತಿರುವಾಗಲೇ ಪರಿಚಯ ಮಾಡಿಸಿ ದರು. ಬಿ. ಎ. ಆದವನಿಗೆ ಮಗಳನ್ನು ಕೊಡುವುದರಲ್ಲಿ ತಮ್ಮ ಊರಿಗೇ ಮೊದಲಿಗನಾಗುವೆನೆಂಬ ಹಿಗ್ಗು ಅವರ ಮಾತು ಮಾತಿನಲ್ಲೆಲ್ಲ ತುಂಬಿತ್ತು.

ನಾಲ್ಕಾರು ಅಂಗಳಗಳನ್ನು ದಾಟಿ ಬಂದಾಯಿತು. ಒಂದು ಅಂಗಳದ ತುದಿಗೆ ಹುಡುಗಿಯರ ‘ ಸುರ್ಗುದ್ದು ’ (ಹುತುತು) ನಡೆದಿತ್ತು. ಇವರು ಬಂದುದನ್ನು ಕಂಡು ಹೊಸಬನಿಗೆ ನಾಚಿ ಹುಡುಗಿಯರು ಆಟ ಬಿಟ್ಟು ಹೊಳ್ಳಿ ಸೇರಿದರು. ಆಟದಲ್ಲಿ ಭಾಗವಹಿಸದೆ ಸುಮ್ಮನೆ ನಿಂತು ನೋಡುತ್ತಿದ್ದ ಗೊಂಬೆ

ಯಂಥ ಒಬ್ಬ ಕನ್ನೆ ಶಂಕರನ ಮನಸ್ಸನ್ನು ಸೆಳೆದಳು. ಇಷ್ಟು ಹೊತ್ತು ಜಡ ವಸ್ತುವಿನಂತೆ ಬರುತ್ತಿದ್ದ ಶಂಕರನ ಜ್ಞಾನಕೋಶ ಈಗ ಸರಿಯಾಗಿ ಆಡ ಹತ್ತಿತು. ಹೆಣ್ಣು ನೋಡಲು ಹೋಗುವ ಉತ್ಸಾಹ ಆಗ ಚಿಗುರಿತು; ತಾನು ಬಂದ ಕಾರ್ಯದ ಅರಿವಾಯಿತು.

ಆದರೆ ನೋಡುತ್ತ ನಿಲ್ಲುವದು, ಹೋಗಹೋಗುತ್ತ ತಿರುತಿರುಗಿ ನೋಡು ವದು ಅವನ ಸ್ವಭಾವಕ್ಕೆ ಸೇರಿದ್ದಲ್ಲ. ಆದರೂ ಒಂದೆರಡು ಸಲ ಏನೋ ನೆವ ಮಾಡಿ, ಹೆಗಡೆಯವರಿಗೆ ಪ್ರಶ್ನೆಕೇಳಿ, ಹಿಂದೆ ತಿರುಗದೆ ಹೋಗಲಿಲ್ಲ. ಇಷ್ಟು ಹೊತ್ತು ಜಟ್ಟನಂತೆ ಬರುತ್ತಿರುವ ಇವನಿಗೆ ತಮ್ಮ ಮನೆ ಸಮೀಪಿಸಿದೊಡನೆ ಮಾತು ಬರಹತ್ತಿತೆಂದು ಹೆಗಡೆಯವರು ಒಳಗೊಳಗೇ ಆನಂದಪಟ್ಟು ಕೊಂಡರು.

ಹೆಗಡೆಯವರ ಮಗಳನ್ನು ನೋಡಿ ಬರುವ ಕಾರ್ಯವು ಸುಸೂತ್ರವಾಗಿ ನಡೆಯಿತು. "ಆದಷ್ಟು ಬೇಗ ನಿಮ್ಮ ಅಭಿಪ್ರಾಯವನ್ನು—" ಎಂದು ಹೆಗಡೆ ಯವರು ಬಿನ್ನೈಸಿಕೊಂಡರು.

"ಓಹೋ" ಎಂದು ಶಂಕರ ಅಲ್ಲಿಂದ ಪಾರಾದ.

"ಹುಡುಗಿಯನ್ನು ನೋಡಿ ಬಂದೆಯಾ ?" ಎಂದು ಶಂಕರನ ದೊಡ್ಡ ತಂದೆಯವರು ಕೇಳಿದರು. ತಂದೆಯಿಲ್ಲದ ಅವನಿಗೆ ಅವರೇ ತಂದೆಯಂತಿದ್ದು, ಶಂಕರನೇ ಹೆಣ್ಣು ನೋಡಿ ಒಪ್ಪಿದ ಬಳಿಕ ತಾವು ಮದುವೆ ಮಾಡುವವ ನೆಂದು ಹೇಳಿದ್ದರು.

"ಯಾರ ಹುಡುಗಿಯನ್ನು ?" ಅರೆನಗೆಯಿಂದ ಶಂಕರ ಕೇಳಿದ.

"ರಾಮಾಯಣ ಓದಿ ರಾಮ ಸೀತೆಗೆ ಏನಾಗಬೇಕು ಎಂದ ಹಾಗೆ ಕೇಳುತ್ತೀಯಲ್ಲೋ ! ಮತ್ತೆ ಯಾರ ಹುಡುಗಿ ? ಹೆಗಡೆಯವರದು"

"ಓಹೋ, ಮರೆತೇ ಹೋಯಿತು !"

"ಅಂದರೆ ? ಅವರ ಮನೆಗೆ ಹೋಗಿ...."

"ಹೌದು ಮನಸ್ಸಿನಲ್ಲಿ ಬೇರೆಯವರ ಮಗಳೊಬ್ಬಳು ಆಗ ತಾನೇ ಬಂದುದರಿಂದ ಹೆಗಡೆಯವರ ಮಗಳನ್ನು ನಾನು ನೋಡಲು ಮರೆತೇ ಬಿಟ್ಟೆ!" ದೊಡ್ಡ ತಂದೆಯೊಡನೆ ಶಂಕರನು ಸರಳವಾಗಿ ನಡೆದುಕೊಳ್ಳುತ್ತಿದ್ದನಾದ್ದರಿಂದ ವಿಷಯವನ್ನೆಲ್ಲ ಹೇಳಿ ತನ್ನ ನಿಶ್ಚಯವನ್ನು ಮಂಡಿಸಿದ.

× × × ×

# ಚೆಲುವು-ಒಲವು !

ಕೊನೆಗೊಮ್ಮೆ ಶಂಕರ ಹೂಂಗುಟ್ಟಲೇಬೇಕಾಯಿತು. “ ಹುಡುಗಿ ಮನಸ್ಸಿಗೆ ಬಂದರೆ ಮಾತ್ರ ಆಗಿ. ಈ ವಿಷಯದಲ್ಲಿ ಒತ್ತಾಯಮಾಡಬಹುದೆ ? ” ಎಂದು ಶಿವರಾಮ ಹೆಗಡೆಯವರು ಶಂಕರನನ್ನು ಹೊರಡಿಸಿದರು.

ದಾರಿಯುದ್ದಕ್ಕೂ ಹೆಗಡೆಯವರು ತಮ್ಮ ಮಗಳ ಗುಣಗಾನವನ್ನು ಪ್ರಸ್ತುತ ಅಪ್ರಸ್ತುತ ಪ್ರಶಂಸೆಗಳಿಂದ ಮಾಡಿ ಅವಳ ಜಾತಕದಲ್ಲಿರುವ ಯೋಗಾವಳಿಗಳನ್ನು ಬಣ್ಣಿಸಿದರು. ಶಂಕರ ಹೂಂಗುಡುತ್ತ ಸಾಗಿದ. ಹೆಗಡೆಯವರ ಕೆಲವು ಮಾತುಗಳಿಗೆ ‘ ಹುಂ ’ ಒಂದರಿಂದಲೇ ಪಾರಾಗಲು ಅವನಿಗಾಗಲಿಲ್ಲ. “ ನಾನು ಹೇಳುವದು ಸರಿಯೋ ಅಲ್ಲವೋ ? ಹೇಳಿ. ತಪ್ಪಾದರೆ ಸರಿಪಡಿಸಿಕೊಳ್ಳುತ್ತೇನೆ ” ಎಂದು ತಮ್ಮ ತಪ್ಪು ಒಪ್ಪಿಕೊಳ್ಳುವ ಗುಣವನ್ನು ದೊಡ್ಡದು ಮಾಡಿ ತೋರಿಸಿದಾಗ “ಹೌದು” ಎಂಬೊಂದು ಶಬ್ದವನ್ನು ಶಂಕರ ಆಡಲೇಬೇಕಾಯಿತು.

ಕೇರಿಯ ಅಂಗಳಗಳನ್ನು ಹಾಯ್ದು ಹೆಗಡೆಯವರ ಮನೆಗೆ ಹೋಗಬೇಕು. ರಸ್ತೆಯಿಂದಲೇ ಹೋಗಲು ಬರುತ್ತಿದ್ದರೂ ತಮ್ಮ ಭಾವೀ ಅಳಿಯನನ್ನು ಕೇರಿಯ ‘ ಗ್ರಾಸ್ತ ’ ರ ದೃಷ್ಟಿಗೆ ಹಾಕಿ, ಅವರ ಕಣ್ಣು ಕುಕ್ಕಿಸಿ ತಮ್ಮ ದೊಡ್ಡಸ್ತನವನ್ನು ಮೆರೆಯಿಸುವ ಹುಮ್ಮಸದಿಂದ ಅಂಗಳಗಳನ್ನೇ ದಾಟುತ್ತ ನಡೆದರು. ಕೆಲವು ಗ್ರಾಸ್ತರಿಗೆ “ ನಾನು ಹೇಳುತ್ತಿದ್ದ ಶಂಕರಭಟ್ಟರು ಇವರೆ. ಬಿ. ಎ. ಆಯಿತು. ” ಎಂದು ಹೋಗುತ್ತಿರುವಾಗಲೇ ಪರಿಚಯ ಮಾಡಿಸಿದರು. ಬಿ. ಎ. ಆದವನಿಗೆ ಮಗಳನ್ನು ಕೊಡುವುದರಲ್ಲಿ ತಮ್ಮ ಊರಿಗೇ ಮೊದಲಿಗನಾಗುವೆನೆಂಬ ಹಿಗ್ಗು ಅವರ ಮಾತು ಮಾತಿನಲ್ಲೆಲ್ಲ ತುಂಬಿತ್ತು.

ನಾಲ್ಕಾರು ಅಂಗಳಗಳನ್ನು ದಾಟಿ ಬಂದಾಯಿತು. ಒಂದು ಅಂಗಳದ ತುದಿಗೆ ಹುಡುಗಿಯರ ‘ ಸುರ್ಗುದ್ದು ’ (ಹುತುತು) ನಡೆದಿತ್ತು. ಇವರು ಬಂದುದನ್ನು ಕಂಡು ಹೊಸಬನಿಗೆ ನಾಚಿ ಹುಡುಗಿಯರು ಆಟ ಬಿಟ್ಟು ಪೋಳಿ ಸೇರಿದರು. ಆಟದಲ್ಲಿ ಭಾಗವಹಿಸದೆ ಸುಮ್ಮನೆ ನಿಂತು ನೋಡುತ್ತಿದ್ದ ಗೊಂಬೆ

ಯಂಥ ಒಬ್ಬ ಕನ್ನೆ ಶಂಕರನ ಮನಸ್ಸನ್ನು ಸೆಳೆದಳು. ಇಷ್ಟು ಹೊತ್ತು ಜಡ ವಸ್ತುವಿನಂತೆ ಬರುತ್ತಿದ್ದ ಶಂಕರನ ಜ್ಞಾನಕೋಶ ಈಗ ಸರಿಯಾಗಿ ಆಡ ಹತ್ತಿತು. ಹೆಣ್ಣು ನೋಡಲು ಹೋಗುವ ಉತ್ಸಾಹ ಆಗ ಚಿಗುರಿತು; ತಾನು ಬಂದ ಕಾರ್ಯದ ಅರಿವಾಯಿತು.

ಆದರೆ ನೋಡುತ್ತ ನಿಲ್ಲುವದು, ಹೋಗಹೋಗುತ್ತ ತಿರುತಿರುಗಿ ನೋಡು ವದು ಅವನ ಸ್ವಭಾವಕ್ಕೆ ಸೇರಿದ್ದಲ್ಲ. ಆದರೂ ಒಂದೆರಡು ಸಲ ಏನೋ ನೆ ಮಾಡಿ, ಹೆಗಡೆಯವರಿಗೆ ಪ್ರಶ್ನೆಕೇಳಿ, ಹಿಂದೆ ತಿರುಗದೆ ಹೋಗಲಿಲ್ಲ. ಇಷ್ಟು ಹೊತ್ತು ಜಡ್ಡನಂತೆ ಬರುತ್ತಿರುವ ಇವನಿಗೆ ತಮ್ಮ ಮನೆ ಸಮೀಪಿಸಿದೊಡನೆ ಮಾತು ಬರಹತ್ತಿತೆಂದು ಹೆಗಡೆಯವರು ಒಳಗೊಳಗೇ ಆನಂದಪಟ್ಟು ಕೊಂಡರು.

ಹೆಗಡೆಯವರ ಮಗಳನ್ನು ನೋಡಿ ಬರುವ ಕಾರ್ಯವು ಸುಸೂತ್ರವಾಗಿ ನಡೆಯಿತು. "ಅದಷ್ಟು ಬೇಗ ನಿಮ್ಮ ಅಭಿಪ್ರಾಯವನ್ನು—" ಎಂದು ಹೆಗಡೆಯವರು ಬಿನ್ನೈಸಿಕೊಂಡರು.

"ಓಹೋ" ಎಂದು ಶಂಕರ ಅಲ್ಲಿಂದ ಪಾರಾದ.

"ಹುಡುಗಿಯನ್ನು ನೋಡಿ ಬಂದೆಯಾ?" ಎಂದು ಶಂಕರನ ದೊಡ್ಡ ತಂದೆಯವರು ಕೇಳಿದರು. ತಂದೆಯಿಲ್ಲದ ಅವನಿಗೆ ಅವರೇ ತಂದೆಯಂತಿದ್ದು, ಶಂಕರನೇ ಹೆಣ್ಣು ನೋಡಿ ಒಪ್ಪಿದ ಬಳಿಕ ತಾವು ಮದುವೆ ಮಾಡುವವ ನೆಂದು ಹೇಳಿದ್ದರು.

"ಯಾರ ಹುಡುಗಿಯನ್ನು?" ಅರೆನಗೆಯಿಂದ ಶಂಕರ ಕೇಳಿದ.

"ರಾಮಾಯಣ ಓದಿ ರಾಮ ಸೀತೆಗೆ ಏನಾಗಬೇಕು ಎಂದ ಹಾಗೆ ಕೇಳುತ್ತೀಯಲ್ಲೋ! ಮತ್ತೆ ಯಾರ ಹುಡುಗಿ? ಹೆಗಡೆಯವರದು"

"ಓಹೋ, ಮರೆತೇ ಹೋಯಿತು!"

"ಅಂದರೆ? ಅವರ ಮನೆಗೆ ಹೋಗಿ...."

"ಹೌದು ಮನಸ್ಸಿನಲ್ಲಿ ಬೇರೆಯವರ ಮಗಳೊಬ್ಬಳು ಆಗ ತಾನೇ ಬಂದುದರಿಂದ ಹೆಗಡೆಯವರ ಮಗಳನ್ನು ನಾನು ನೋಡಲು ಮರೆತೇ ಬಿಟ್ಟೆ!" ದೊಡ್ಡ ತಂದೆಯೊಡನೆ ಶಂಕರನು ಸರಳನಾಗಿ ನಡೆದುಕೊಳ್ಳುತ್ತಿದ್ದನಾದ್ದರಿಂದ ವಿಷಯವನ್ನೆಲ್ಲ ಹೇಳಿ ತನ್ನ ನಿಶ್ಚಯವನ್ನು ಮಂಡಿಸಿದ.

× × × ×

ಜಾತಕವೂ ಕೂಡಿ ಬಂತು. ಹುಡುಗಿಯ ತಂದೆ-ತಾಯಿಗಳು ಆನಂದ ದಿಂದ ಕುಣಿದಾಡಿ ತಮ್ಮ ಅಂಗಳದಲ್ಲಿಯೇ ಶಂಕರನನ್ನು ಕರೆದುಕೊಂಡು ಹೋಗಿ ಅವನ ದೃಷ್ಟಿಗೆ ತಮ್ಮ 'ಸಾವಿತ್ರಿ' ಬೀಳುವಂತೆ ಮಾಡಿದುದಕ್ಕಾಗಿ ಶಿವರಾಮ ಹೆಗಡೆಯವರಿಗೆ ಅನೇಕ ಧನ್ಯವಾದಗಳನ್ನರ್ಪಿಸಿದರು.

ಒಂದೇ ಪಕ್ಷದೊಳಗೆ ಮದುವೆಯಾಗಿ ಹೋಯಿತು. ಶಿವರಾಮ ಹೆಗಡೆಯವರು "ನಾನು ಅಂಗಳದ ದಾರಿಯಲ್ಲಿ ಅವನನ್ನು ಕರೆದುಕೊಂಡು ಬಂದದ್ದೇ ತಪ್ಪಾಯಿತು" ಎಂದು ಗೊಣಗಿಕೊಂಡರು. "ಬ್ರಹ್ಮ ಬರೆದಂತೆಯೇ ಆಗುತ್ತದೆ" ಎಂದು ತಮ್ಮ ಮನಸ್ಸಿಗೆ ಉಪದೇಶ ಮಾಡದೆ ಹೋಗಲಿಲ್ಲ.

× × × ×

ಬಿ. ಎ. ಆದವನಿಗೆ ರೇಶನ್ ಇನ್‌ಸ್ಪೆಕ್ಟರನಾಗುವದು ಕಠಿಣವಾಗಲಿಲ್ಲ. ಮದುವೆಯಾಗಿ ಮೂರು ತಿಂಗಳೊಳಗೇ ಶಂಕರ ಆ ಊರಿನಿಂದ ಈ ಊರಿಗೆ ಬಂದು ಬಿಡಾರ ಹೂಡಿದ. ಮಗ ಸೊಸೆಗಳೊಡನೆ ವಿಧವೆ ತಾಯಿ ಬರುವದು ಸಹಜವಾಗಿತ್ತು. ಆದರೆ ಶಂಕರನೇ "ಎಲ್ಲ ವ್ಯವಸ್ಥೆಯಾದ ಮೇಲೆ ಪತ್ರ ಹಾಕುತ್ತೇನೆ. ಇನ್ನೊಂದು ತಿಂಗಳೊಳಗೆ ನೀನು ಬರುವದಾಗುತ್ತದೆ" ಎಂದು ತಾಯಿಗೆ ಹೇಳಿ ಹೆಂಡತಿಯೊಬ್ಬಳನ್ನೇ ಕರೆದುಕೊಂಡು ಹೊರಟ.

ಬಿಡಾರ ಹೂಡಿಯಾಯಿತು. ಕೆಲಸಕ್ಕೆ ಹಾಜರಾಗಿ ಸಾಯ್ಕಲ್ಲಮೇಲೆ ಓಡಾಡುವದು ಸುರುವಾಯಿತು. ಮೆಚ್ಚಿ ಮದುವೆಯಾದ ಹೆಂಡತಿಯೊಡನೆ ನಲಿಯುತ್ತ ಹೊಸ ಸಂಸಾರ ನಡಿಸಬೇಕೆಂಬ ಆಸೆ ಹೀಗೆ ಕಣ್ಣು ಬಿಟ್ಟು ನೋಡಿತು. ಏನೂ ಹೆಚ್ಚುಕಡಿಮೆಯಾಗಿಲ್ಲ. ಅದೇ ನಿಸರ್ಗ ಸುಂದರಿ. ಗೊಂಬೆಯಂತೆ ಶೋಭಿಸುತ್ತಾಳೆ. ಆಂ ಅಂತ ಕಿವಿ ಎಳೆದುಕೊಂಡು ಕೇಳಿಯಾಯಿತು. ಅದೇ ಮುದ್ದು ಮುದ್ದಾದ ಮಾತು. ಅಲ್ಲ, ಅಲ್ಲ, ಕಣ್ಣು ಉಜ್ಜಿಕೊಂಡು ನೋಡುತ್ತಾನೆ. ಗೊಂಬೆಯಂತೆ ಶೋಭಿಸುತ್ತಿದ್ದಾಳೆ ಹೆಂಡತಿ. ಕರ್ಪೂರದ ಗೊಂಬೆ ! ಹಾಸಿಗೆಯ ಪಿಂಡಿಯ ಮೇಲೆ ಸುಮ್ಮನೆ ಕುಳಿತಿದ್ದಾಳೆ. ಕಿವಿಗಳನ್ನು ಹೀಗೆ ಒಡ್ಡಿ ಕೇಳುತ್ತಾನೆ. ಅದೇ ಮುದ್ದು ಮುದ್ದು–ಅಲ್ಲ. ಅಲ್ಲ ತೊದಲು ತೊದಲು–

"ನನಗೆ ಹಸಿವೆಯಾಗುತ್ತದೆ."

" ಅಡಿಗೆ ಮಾಡಲೇ ಇಲ್ಲವೇ ?"

" ಅಂದರೆ ?"

" ಅಂದರೆ ? ನೀನು ನಮ್ಮಿಬ್ಬರಿಗಾಗಿ ಅಡಿಗೆ ಬೇಯಿಸಲಿಲ್ಲವೇ ?"

" ನೀರೇ ಇಲ್ಲ."

..........................

" ನನ್ನ ಸೀರೆ ಮಣ್ಣಾಗಿದೆ."

..........................

" ನೋಡಿ ಅಂದರೆ, ಕಾಲಿಗೆ ಭತ್ತದ ಮೊನೆ ನಟ್ಟು ಹೋಗಿ ಬಾತು ಬಿಟ್ಟಿದೆ. ಕಾಣುವದಿಲ್ಲವೆ ?"

..........................

" ಇಂದು ನನ್ನ ಸೀರೆ ನೀವೇ ಸ್ವಲ್ಪ ಒಗೆದು ಕೊಡಲಾರಿರಾ ? ಬಹಳ ಆಯಾಸವಾಗಿದೆ ಚಣ್ಣೆ ಅರಿದು ಅರಿದು."

ಅದೇ ಮುದ್ದು ಮೊಗ ! ಅದೇ ಹೂವರಳಿದಂಥ ಮಾತು ! ಅದೇ ಪ್ರೀತಿ ತುಂಬಿ ತುಳುಕುವ ಧ್ವನಿ ! ಶಂಕರ ಮಡದಿಗೆ ಮುದ್ದುಕೊಟ್ಟು ಮನೆ ಕೆಲಸ ಕಲಿಸಿದ.

" ನೀವು ಮಾತಾಡುವದಿಲ್ಲ. ನನಗೆ ಅಳು ಬರುತ್ತದೆ."

..........................

" ನೀವು ಇಲ್ಲವಾಗ ಯಾರಾದರೂ ಬಂದರೆ ಏನು ಮಾಡಲಿ ?"

..........................

" ನೀವು ಹೀಗೆ ಸುಮ್ಮನೆ ಕುಳಿತರೆ ನಾನು ಭಾವಿ ಹಾರಿ ಸತ್ತು ಬಿಡು ತ್ತೇನೆ "

ಅದೇ ತನ್ನ ಮನಸೆಳೆದ ಕಣ್ಣು ! ಅದೇ ತನ್ನನ್ನು ಸೆರೆ ಹಿಡಿದ ಚೆಲುವು! ಆದರೆ....

ಮಧ್ಯ ರಾತ್ರಿಯ ಆಕಾಶವನ್ನೇ ದಿಟ್ಟಿಸುತ್ತನಿಂತ ಶಂಕರನ ಕಣ್ಣುಗಳು ತುಂಬಿ ಬಂದವು.

ಸೂರ್ಯೋದಯ, ಹೂ, ತಾರಾಮಂಡಲ—ಎಲ್ಲ ಚೆಂದ. ಹೆಣ್ಣು— ಎಲ್ಲಕ್ಕೂ ಮಿಗಿಲು ಚೆಲುವಿನಲ್ಲಿ.

ಆದರೆ........

ಶಿಳುವಳಿಕೆಗೂ ಚೆಲುವಿಗೂ ಹೀಗೆ ಸಂಬಂಧವೇ ಇಲ್ಲದಿದ್ದರೆ, ಸೌಂದ ರ್ಯದ ಆರಾಧನೆ ಹುಂಬತನ.

ಚೆಲುವು ಹುಡುಕಿ ಒಲವು ಹೋಯಿತು. ಚೆಲುವಿನ ಸೀಮೆಯಲ್ಲಿ ಕಳವೂರಿದ ಮೇಲೆ ತೋರಿತು ಒಲವಿಗೆ ತಲೆಯಿಲ್ಲ. ಅದರಿಂದ ಉಪಯೊ. ಗವೂ ಇಲ್ಲ.

ಚೆಲುವು, ಒಲವು, ಉಪಯೋಗ....ಬುದ್ಧಿ—ಶಂಕರನ ತಲೆ ಗಿರ್ರೆಂದು ತಿರುಗಿದಂತಾಯಿತು. ಹೊಡೆಯುವದು ಕಾಡು. ರಮಿಸಿ ತಿಳಿಸಿದರೆ ಬರ ಬಹುದೇ ? ಬಂದೀತು. ಆದರೆ ಇಷ್ಟೆಲ್ಲ ತೊಂದರೆ ಯಾರಿಗೆ ಬೇಕಾಗಿತ್ತು ? ಚೆಲುವನ್ನು ಬೆನ್ನಟ್ಟಿದ ಒಲವಿಗೆ !

"ಹರ ಹರ ಮಹದೇವ....ದೇವರೇ ಗತಿ." ಶಂಕರ ಬಂದು ಮಲಗಿದ.

" ಸಾವಿತ್ರಿ, ಹೆರಿಗೆಗೆ ನೀನು ತವರಿಗೆ ಹೋಗುವಿಯೋ ? ಅಥವಾ ಇಲ್ಲಿಯೋ ?"

" ಇಲ್ಲೇ ಎರಡು ಮೊಟ್ಟೆ ಹಾಕಿದರೆ ಆಗಲಿಕ್ಕಿಲ್ಲವೇ ?"

" ಆಂ ?"

" ಇಲ್ಲೇ ಮೊಟ್ಟೆ—?"

ಹೊಡೆದೆಬ್ಬಿಸಿದಂತೆ ಎಚ್ಚರವಾಯಿತು. ನೋಡಿದ. ಸಾವಿತ್ರಿ ಗೊರ ಯುತ್ತಿದ್ದಾಳೆ ! ಅರೆನಿದ್ದೆಯಲ್ಲಿ.

ತನಗೆ ತಾನೇ ಕೇಳಿಕೊಂಡು, ಉತ್ತರ ಕೊಟ್ಟು, ಹೆದರಿ ಎಚ್ಚತ್ತಿದ್ದಾನೆ! ಸಾವಿತ್ರಿ ಇಷ್ಟು ಹುಂಬಳಿರಲಿಕ್ಕಿಲ್ಲವೆಂದು ಅಂದುಕೊಂಡು ಸುಮ್ಮನೆ ಮಲಗಿದ.

ಮರುದಿನದಿಂದ ಸಾವಿತ್ರಿಗೆ ಶಂಕರನ ಪಾಠಕ್ರಮ ಸುರುವಾಯಿತು. ಇದರ ಪರಿಣಾಮವಾಗಿ ಸಾವಿತ್ರಿ ರಾತ್ರೆ ಹನ್ನೆರಡು ತಾಸು ಗೊರೆಯ ಹತ್ತಿ ದಳು. ಕೇಳಿದರೆ "ನೀವು ಹೇಳಿಕೊಟ್ಟಿದ್ದನ್ನೆಲ್ಲ ಧ್ಯಾನಿಸಿ ಧ್ಯಾನಿಸಿ ತಲೆ ಕಾದು ಹೋಗುತ್ತದೆ. ಮನೆ ಕೆಲಸ ಮತ್ತೆ" ಅನ್ನುತ್ತಾಳೆ.

ಈಗ ಹದಿನಾರು ವರ್ಷ ಸಾವಿತ್ರಿಗೆ. ಏನು ನಿದ್ದೆ ಅದು !

ಶಂಕರನಿಗೆ ಖಾತ್ರಿಯಾಯಿತು—ಇವಳೊಂದು ಮೊದ್ದು, ಚೆಲುವಿನ ಮುದ್ದೆ. ಇವಳ ತಲೆಯೊಳಗೆ ಮೆದುಳೇ ಇಲ್ಲ. ಅವನು ಒಂದು ತತ್ವವನ್ನೂ

ಕಂಡು ಕೊಂಡು ಬಿಟ್ಟ ಅದರಿಂದಲೇ : ಬುದ್ಧಿಯಿಲ್ಲದಲ್ಲಿ ಒಮ್ಮೆ ಚೆಲುವು ಕಾಲಿಟ್ಟಿತೆಂದರೆ ಅದು ಅಲ್ಲಿ ಹುಲುಸಾಗಿ ಬೆಳೆಯುತ್ತದೆ. ಸೌಂದರ್ಯದ ಪರಮಾವಧಿಯ ಬುಡದಲ್ಲಿ ಅಜ್ಞಾನದ ಅಂಧಃಕಾರವಿದೆ.

ಆದರೆ ಇಂಥ ಅಗ್ಗದ ತತ್ವಜ್ಞಾನದಿಂದ ಅವನ ಹರೆಯದ ಸಂಸಾರದ ತೊಡಕು ಬಿಡಲಿಲ್ಲ.

ಒಂದು ದಿನ ಅವನಿಗೆ ಹೀಗೂ ಅನಿಸಿಬಿಟ್ಟಿತು. ಇವಳಿಂದಾಗಿ ನಾನು ಹೀಗೆ ವಿಚಾರಿಸಹತ್ತಿ, ಚಡಪಡಿಸಿ, ನನಗೆ ದೇವರು ಕೊಟ್ಟ ಒಂದು ಒಂದೂ ವರೆ ತೊಲೆ ಬುದ್ಧಿಯನ್ನೂ ಕೆಡಿಸಿಕೊಳ್ಳುತ್ತೇನೆ.

ಆಫೀಸಿನಲ್ಲಿ ಕಾರಕೂನರು ಶಂಕರನ ಬುದ್ಧಿಗೇಡಿತನಕ್ಕೆ ಹಾಸ್ಯಮಾಡ ಹತ್ತಿದರು. ೩+೪=೬ ಎಂಬ ಅವನ ಹಲಕೆಲವು ಲೆಕ್ಕಗಳಿಂದ “ಶಂಕರ ರಾಯರಿಗೆ ಒಂದು ಸ್ಕ್ರೂ ಲೂಸ್ ಆಗಿದೆ” ಎಂಬ ಶೋಧಮಾಡಿದರು ಗುಮಾಸ್ತೆಗಳು !

ಮಗನ ಕರೆ ಬಾರದುದನ್ನು ಕಂಡು ಶಂಕರನ ತಾಯಿ “ನನ್ನನ್ನು ಎಂದು ಕರೆಯಿಸಿಕೊಳ್ಳುವಿ ?” ಪತ್ರದಿಂದ ಕೇಳಿಸಿದಳು. ಇವನ ಉತ್ತರವೇ ಇಲ್ಲ. ಕೊನೆಗೆ ಒಂದುದಿನ ಅವಳು ಬಹಳ ಬೇಸರಗೊಂಡು ಈ ಊರಿಗೆ ಬಂದೇ ಬಿಟ್ಟಳು.

ಮುಂದೇನೂ ಆಗಲಿಲ್ಲ. ಅಂದರೆ ಇಷ್ಟೇ. ಸರ್ವಸಾಮಾನ್ಯ ಕೌಟುಂಬಿಕ ಘಟನೆಗಳ ಹೊರತು ವಿಶೇಷವೇನೂ ಆಗಲಿಲ್ಲ. ವಿಶೇಷ ಸಂಗತಿಗಳು ಆಗುವ ಮುಂಚೆಯೇ ಶಂಕರನ ತಾಯಿ ಬಂದುಬಿಟ್ಟಳು. ಅದರಿಂದ ಆಗಬಹುದಾದ ಅನೇಕಾನೇಕ ಸಾವಿತ್ರೀ ಶಂಕರರ ಘಟನೆಗಳು ಆಗಲಿಲ್ಲ. ಆದ ಒಂದೇ ಒಂದು—ಅಲ್ಲ ಎರಡು—ಸಂಗತಿಗಳು ಇವು:

“ಅತ್ತೆ, ಈಗ ಬಂದಿರಾ ? ಏನು ಒಬ್ಬರೇ ಬಂದಿರಾ ? ಬನ್ನಿ. ಒಳ್ಳೆಯದಾಯಿತು ಅತ್ತೆ, ನೀವು ಬಂದದ್ದು. ಅತ್ತೆ ನಾನು ಬ....ಸು....ರಿ ಅವರಿಗೆ ಹೇಳಬೇಡಿ ಮತ್ತೆ !” ಅಂದಳು ಸಾವಿತ್ರಿ.

“ಅಮ್ಮಾ ಬಂದೆಯಾ ? ಏನು ಒಬ್ಬಳೇ ಬಂದೆಯಾ ? ಬಾ. ಒಳ್ಳೆಯ ದಾಯಿತು ನೀ ಬಂದದ್ದು. ಅಮ್ಮ, ನನ್ನನ್ನು ಈ ಹಾಳು ಕೆಲಸದಿಂದ ಕಿತ್ತು ಹಾಕಿಬಿಟ್ಟರು. !” ಅಂದ ಶಂಕರ.

---

# ಅಜ್ಜಿಯ ಕರುಳು

ದೀಪಾವಳಿಯ ಸೂಟಿಯನ್ನು ಕಳೆಯಲು ಊರಿಗೆಹೋಗಿದ್ದೆ. ಹಳ್ಳಿಗೆ ಹೋದಾಗೆಲ್ಲ ಕತೆಯ ಸುಬ್ಬಣ್ಣನ ಮನೆಗೆ ಹೋಗದಿದ್ದರೆ ನನ್ನ ಮನಸ್ಸು ಕೇಳುವದಿಲ್ಲ. ಊರಿಗೆ ಬಂದು ತನ್ನ ಮನೆಗೆ ಬರದಿದ್ದರೆ ಸುಬ್ಬಣ್ಣ ಬಿಡುತ್ತಾನೇ ? ಅವನ ಆಮಂತ್ರಣ ಬರುವ ಮುಂಚೆಯೇ ಹೋಗುವದು ಉಚಿತವೆಂದು ತೋರಿತು. ಅವನ ಕತೆ ಕೇಳಬೇಕೆಂಬ ತವಕವೂ ತುಂಬಾ ಆಗಿತ್ತು.

ನಾನು ಅವನ ಮನೆಗೆ ಹೋದಾಗ ಸುಬ್ಬಣ್ಣ ದಂಪತಿಗಳಿದ್ದಿಲ್ಲ. ಅವನ ತಾಯಿ ಗೋಪಜ್ಜಿ ಮನೆಯನ್ನು ಕಾಯುತ್ತಿದ್ದಳು. ನನ್ನನ್ನು ಕಂಡು "ಯಾವಾಗ ಬಂದೆ ತಮ್ಮಾ ? ಆರೋಗ್ಯವೇ ?" ಎಂದು ಕೇಳುತ್ತ ಹಕ್ಕೆ ಹೊಳ್ಳಿಯಮೇಲೆ ಕಂಬಳಿ ಹಾಸಿದಳು.

"ಸುಬ್ಬಣ್ಣ ಮನೆಯಲ್ಲಿಲ್ಲವೆಂತ ತೋರುತ್ತದೆ." ಅತ್ತಿತ್ತ ನೋಡುತ್ತ ಹೇಳಿದೆ.

"ಅವರಿಬ್ಬರೂ ತೋಟಕ್ಕೆ ಹೋಗಿದ್ದಾರೆ. ಕೂತುಕೊ" ಅಂದವಳೇ ಒಳಗೆ ಹೋದಳು.

ನಾನು ಹೊಳ್ಳಿಯಮೇಲೆ ತಿರುಗಾಡುತ್ತ, ಗೋಡೆಯ ಮೇಲಿನ ಈಶ್ವರ ಗಣಪತಿಗಳ ಚಿತ್ರವನ್ನು ನೋಡುತ್ತಿರುವಾಗ ಗೋಪಜ್ಜಿ ಹೊರಗೆ ಬಂದು "ಮತ್ತೇನು ಸುದ್ದಿ ? ಈ ಸಲವಾದರೂ ಮದುವೆ ಮಾಡಿಕೊಳ್ಳುತ್ತೀಯೋ ಇಲ್ಲವೊ ? ದುಗ್ಗೂರಿನ ಗಣಪಯ್ಯ ಭಟ್ಟರಿಗೊಂದು ಮಗಳಿದ್ದಾಳೆ. ಓದು ಬರೆಯಲು ಬರುತ್ತದೆ. ಬಿಳೇ ಚರ್ಮದ ಹುಡುಗಿ. ನಿನಗೆ ಚೆನ್ನಾಗಿ ಒಪ್ಪುತ್ತಾಳೆ. ನೋಡು, ಗೋಪಜ್ಜಿಯ ಮಾತು ಅಂತ ಕಡೆಗಣಿಸಬೇಡ. ನೀನು ನೋಡಬೇಕೆಂದಿದ್ದರೆ ನಿನ್ನ ಕಣ್ಣಿಗೆ ಅವಳನ್ನು ಹಾಯಿಸಿಕೊಡುತ್ತೇನೆ.ಹೇಗೆ?" ಎಂದು ನಾನು ಯಾವಾಗ ಬಂದರೂ ಎತ್ತುವ ವಿಷಯವನ್ನೇ ಸುರುಮಾಡಿದಳು.

" ನೋಡುವ ಗೋಪಜ್ಜಿ. ನನಗೆ ಇನ್ನೂ ಎರಡು ವರ್ಷ ಕಲಿಯು ಬೇಕು. "

" ಹೀಗೇ ಕಲಿಯುತ್ತ ಹೋಗುವದಾದರೂ ಎಷ್ಟು ವರ್ಷ ? ನಿನ್ನ ವಯಸ್ಸಿಗೆ ನಮ್ಮ ಮನೆಯವರಿಗೆ ಸುಬ್ಬ ಹುಟ್ಟಿದ್ದ. ಕಲಿಯುವದರಲ್ಲೇ ಅರ್ಧ ಆಯುಷ್ಯ ಹೋದರೆ ಸಂಪಾದನೆ ಮಾಡುವದು ಯಾವಾಗ ? ಇನ್ನು ಕಲಿಯಬೇಕೆಂದೇ ಇದ್ದರೆ ಮದುವೆ ಮಾಡಿಕೊಂಡು ಹೋದರಾಯಿತು. ಮನೆಯಲ್ಲಿ ಅಬ್ಬೆಗೂ ಸಹಾಯಕ್ಕೆ ಸೊಸೆಯಾಯಿತು. ಮೇಲಾಗಿ ಇಂಥ ಹುಡುಗಿಯರು ಸಿಗುವದು ಅಪರೂಪ.... " ನಾನು ಗಣಪತಿಯು ಇಲಿಯ ಮೇಲೆ ಸವಾರಿಮಾಡುವ ಚಿತ್ರವನ್ನೇ ನೋಡುತ್ತ ಅವಳ ಮಾತಿಗೆಲ್ಲ 'ಹುಂ' ಅಂದೆ.

ಮತ್ತೆ ಒಳಗೆ ಹೋಗಿ ಗೋಪಜ್ಜಿ ಅವಲಕ್ಕಿ ಚಹ ತಂದಳು.

ಅವಲಕ್ಕಿಯನ್ನು ಜಗೆಯುತ್ತ ಗೋಪಜ್ಜಿಯು ಮತ್ತೆ ಎತ್ತಿದ ವಿಷಯ ವನ್ನು ಜಾರಿಸಲೆಂದು " ಸುಬ್ಬನ ಮಾಣಿ ಎಲ್ಲಿ ? ಅಪ್ಪ ಅಬ್ಬೆಯ ಜೊತೆಗೆ ತೋಟಕ್ಕೆ ಹೋಗಿದ್ದಾನೆಯೇ ? " ಎಂದು ಕೇಳಿದೆ.

ನಾನು ಜಗೆಯುತ್ತಿದ್ದ ಅವಲಕ್ಕಿ ಇನ್ನೂ ಗಂಟಲಲ್ಲಿ ಇಳಿದಿತ್ತಿಲ್ಲ. ಆಶ್ಚರ್ಯವಾಯಿತು. ಗೋಪಜ್ಜಿಯ ಕಣ್ಣಲ್ಲಿ ನೀರು ಒಡೆದು " ತಮ್ಮಾ ಇಶ್ವೇಶ್ವರ ಸತ್ತು ಹೋಗಿ ವರುಷವಾಗುತ್ತ ಬಂತು " ಎಂದು ಅವಳು ಅಳ ಹತ್ತಿದಳು.

ನನಗೆ ಸುಬ್ಬಣ್ಣನ ಮಗ ತೀರಿಕೊಂಡ ವಿಷಯ ಗೊತ್ತಿದ್ದಿಲ್ಲ. ಎಷ್ಟೋ ವರ್ಷ ಮಕ್ಕಳಾಗಲಿಲ್ಲವೆಂದು ಕೊರಗುತ್ತಿದ್ದ ಸುಬ್ಬಣ್ಣ ದಂಪತಿಗೆ ಒಂದು ಗಂಡು ಹುಟ್ಟಿತೆಂಬ ಸುದ್ದಿ ಮಾತ್ರ ನನಗೆ ಮುಟ್ಟಿತ್ತು. ಮನೆಗೆ ಬಂದ ನನಗೆ ಸುಬ್ಬಣ್ಣನ ಮಾಣಿ ಸತ್ತ ಸುದ್ದಿಯನ್ನು ಯಾರೂ ತಿಳಿ ಸಲೇ ಇಲ್ಲ. ಒಂದುವೇಳೆ " ನಾನು ಸುಬ್ಬಣ್ಣನ ಮನೆಗೆ ಹೋಗಿಬರುತ್ತೇನೆ" ಎಂದು ಮನೆಯಲ್ಲಿ ಹೇಳಿ ಹೊರಟಿದ್ದರೆ ಈ ಸಂಗತಿ ನನಗೆ ಮೊದಲೇ ಗೊತ್ತಾಗುತ್ತಿತ್ತೇನೊ.

" ಏನಾಗಿತ್ತು ವಿಶ್ವೇಶ್ವರನಿಗೆ ? "

“ ಅದನ್ನು ಹೇಳಿ ಏನು ಪ್ರಯೋಜನ ?....ನನ್ನ ಕೈಯಿಂದೇ ಅವನ ಮರಣ ಸಂಭವಿಸಿತೆಂಬಂತೆ ನಮ್ಮ ಮನೆಯ ಮಾಣಿ, ಸೊಸೆ ಎಲ್ಲ ಹೇಳುತ್ತಾರೆ....ಪೂರ್ವಜನ್ಮದಲ್ಲಿ ಯಾವ ಪಾಪ ಮಾಡಿದ್ದೆನೋ ದೇವರೇ ಬಲ್ಲ....ಕೆಟ್ಟ ಜೀವ ಹೋಗುವದೂ ಇಲ್ಲ ”

“ ಆದದ್ದಾದರೂ ಏನೂ ಗೋಪಮ್ಮ ? ಹೀಗೆಲ್ಲ ಮನಸ್ಸಿಗೆ ಹಚ್ಚಿಕೊಂಡರೆ ಹೇಗೆ ? ಕೊಡುವವನೂ ಕೊಳ್ಳುವವನೂ ದೇವರಲ್ಲವೇ ? ”

“ ನನಗೆ ಜೀವವನ್ನು ಕೊಟ್ಟು ಇನ್ನೂ ಕೊಂಡು ಹೋಗದ ದೇವರಿಗೆ ನಾನು ಹೇಳುವದು.... ”

“ ಅದಿರಲಿ. ವಿಶ್ವೇಶ್ವರನಿಗೆ ಏನಾಗಿತ್ತು ? ”

“ ತಮ್ಮಾ, ನಾನು ಸತ್ಯವನ್ನೇ ಹೇಳಿದರೂ ಯಾರು ನಂಬುತ್ತಾರೆ?.... ಅವನಿಗೆ ಜೋರು ಜ್ವರ ಬಂದಿತ್ತು. ದಾಕ್ತಾರರನ್ನು ಕರೆದು ಮದ್ದು ಮಾಡಿಸುತ್ತಿದ್ದ ಸುಬ್ಬ. ದಾಕ್ತಾರ, ಜ್ವರಕ್ಕೆ ಏನೇನೋ ಹೆಸರಿಟ್ಟು ಅನ್ನ ಆಹಾರ ಏನೂ ಕೊಡಕೂಡದು. ಕೇವಲ ಬಿಸಿನೀರು ಕೊಡಬೇಕು. ಮೇಲೆ ಮದ್ದು. ಹೇಳಿಹೋದ. ತುಸು ಗುಣವಾದರೂ ವಿಶ್ವೇಶ್ವರ ಹಾಸಿಗೆಯ ಮೇಲೆಯೇ ಇದ್ದ. ಒಂದುದಿನ ಮಾಣಿ (ಸುಬ್ಬಣ್ಣ) ಸೊಸೆ ಯಾರೂ ಇದ್ದಿಲ್ಲ. ಅಂಬೋಡೆ ಮಾಡಿದ್ದೆ. ಹೇಗೋ ವಿಶ್ವೇಶ್ವರನಿಗೆ ಅದರ ಸೂಟು ಹತ್ತಿತು. ಯಾರೂ ಇಲ್ಲದಾಗ ನನ್ನನ್ನು ಕರೆದು....ಅಮ್ಮಾ ಅಂಬೋಡೆ ಮಾಡಿದ್ದಾರೆ. ಅಲ್ಲವೇ ? ನನಗೆ ಒಂದು ಚೂರೂ ಕೊಡದೆ ಎಲ್ಲವನ್ನೂ ತಿಂದೆಯಾ? ಎಂದು ಬಾಯ್ಬಿಟ್ಟ. ಎಷ್ಟೆಂದರೂ ಸಣ್ಣ ಮಾಣಿಯಲ್ಲವೇ ? ಅವನು ಅಮ್ಮಾ ಎಂದು ಕೇಳಿದಾಗ ನನ್ನ ಕರಳು ಕರಗಿ ನೀರಾಯಿತು. ಅವನದೂ ಜೀವಾತ್ಮ ನೋಡು. ಒಂದು ಚೂರು ಕೊಟ್ಟರೆ ಏನೂ ಆಗಲಿಕ್ಕಿಲ್ಲವೆಂದು ಕೊಟ್ಟೆ. ಅವನಿಗೆ ಸ್ವಲ್ಪ ಗುಣವೂ ಆಗಿತ್ತು ಮೇಲಾಗಿ.

ಜ್ವರ ಮರುಕಳಚಿತು. ಅವನನ್ನು ಬದುಕಿಸಿಕೊಳ್ಳಲಾಗಲಿಲ್ಲ. ಅವನು ಸತ್ತ ಮೇಲೆ ನಾನು ಅವನಿಗೆ ಒಂದು ಚೂರು ಅಂಬೋಡೆ ಕೊಟ್ಟಿದ್ದೇ ತಪ್ಪಾಯಿತೋ ಅಂತ ನನಗೆ ತೋರಹತ್ತಿತು. ಸುಬ್ಬನಿಗೂ ನಾನು ಕೊಟ್ಟ ಸಂಗತಿ ಹೇಳಿದೆ. ಕೂಡಲೆ ನಾನೇ ಕೈಯಾರೆ ಕೊಂದೆನೆಂದು ಗಂಡಹೆಂಡರಿಬ್ಬರೂ

ಹೇಳಹತ್ತಿದರು. ನಾನು ಅಂಬೋಡೆ ಕೊಟ್ಟ ಸಂಗತಿಯನ್ನು ಹೇಳಿದ್ದೇ ತಪ್ಪಾಯಿತೆಂದು ತೋರುತ್ತದೆ.

ನೀನೇ ಹೇಳು ತಮ್ಮ. ಸಣ್ಣಬಾಲೆ 'ಅಮ್ಮಾ ನನಗೆ ಕೊಡದೆ ಎಲ್ಲ ಅಂಬೋಡೆಯನ್ನೂ ನೀನೇ ತಿಂದೆಯಾ ?' ಅಂತ ಕೇಳಿದರೆ ಯಾರ ಎದೆ ಕರಗುವದಿಲ್ಲ ? ನೀನಾದರೆ ಕೊಡದಿರುವೆಯಾ ? ಅಂಬೋಡೆಯ ಚೂರು ತಿಂದರೆ ಸಾಯುತ್ತಾರೆಯೇ ? ಇಶ್ವೇಶ್ವರ ಹಾಗೆ ಕೇಳಿದಾಗ ನನ್ನ ಎದೆಯನ್ನು ಹಿಡಿದು ಹಿಂಡಿದ ಹಾಗಾಯಿತು. ಅಂಬೋಡೆಯ ಚೂರು ತಿಂದರೆ ಅವನು ಹೀಗೆ ಆಗುತ್ತಾನೆಂದು ನನಗೆ ಸ್ವಲ್ಪವಾದರೂ ತಿಳಿದಿದ್ದರೆ ನಾನು ಅವನಿಗೆ ಕೊಡುತ್ತಿದ್ದನೇ ? ನನಗೆ ಅವನ ಮೇಲೆ ಹಗೆಯೆ ? ನಾನೂ ಮಕ್ಕಳನ್ನು ಹೆತ್ತು ಸಾಕಿದವಳಲ್ಲವೇ ? ಸ್ವತಃ ಮೊಮ್ಮಗನು ಸಾಯಲಿ ಅಂತ ಕನಸು ಮನಸ್ಸಿನಲ್ಲಾದರೂ ನನಗೆ ಅನಿಸುವದು ಸಾಧ್ಯವೇ ? ಹೇಳುವವರು ಹೇಳಿ ಕೊಳ್ಳಲಿ. ನಾನು ಕೆಟ್ಟದ್ದಾಗಲಿ ಅಂತ ಕೊಟ್ಟೆನೋ, ಎದೆ ಕರಗಿ ಕೊಟ್ಟೆನೋ ಪರಮಾತ್ಮನಿಗೆ ಗೊತ್ತಿದೆ. ಅವನು ಮಾತ್ರ ನನ್ನನ್ನು ಸರಿಯಾಗಿ ತಿಳಿದುಕೊಳ್ಳದೆ ಹೋಗುವದಿಲ್ಲ. "

" ಸುಮ್ಮನಿರು ಗೋಪಮ್ಮ. ಮಗಸತ್ತ ದುಃಖದಿಂದ ಹಾಗೆ ಹೇಳಿರ ಬಹುದು ಸುಬ್ಬಣ್ಣ. ತನ್ನ ತಾಯಿಯ ಕರುಳಿನ ಜ್ಞಾನ ಅವನಿಗಿಲ್ಲವೇ ? ದೇವರು ನಡೆಯಿಸಿ ಅವನಿಗೆ ಇನ್ನೊಬ್ಬ ಮಗ ಹುಟ್ಟಿದನೆಂದರೆ ಎಲ್ಲ ಸರಿ ಯಾಗುತ್ತದೆ " ಎಂದು ನಾನು ದೊಡ್ಡ ವೇದಾಂತಿಯಂತೆ ನುಡಿದೆ.

" ಎಲ್ಲಾದರೂ ಹಾಳುಬಾವಿಗೆ ಬಿದ್ದು ಈ ಕೆಟ್ಟ ಜೀವವನ್ನು ಬಿಡುವ ಅಂದರೆ ಮನಸ್ಸು ಕೇಳುವದಿಲ್ಲ. ಗೌರಿ (ಸೊಸೆ) ಮತ್ತೆ ಬಸುರಿ. ಮೊಮ್ಮಕ್ಕ ಳನ್ನು ತೋರಿಸಬೇಕೆಂದು ದೇವರಿಗೆ ಅನಿಸಿದರೆ ಅವರನ್ನು ಕಾಣುವವರೆಗೆ ನನ್ನನ್ನು ಇಟ್ಟೇ ಇಡುತ್ತಾನೆ. ಆದರೆ ಈಸಲ ನಾನು ಯಾವ ಗೋಜಿಗೂ ಹೋಗುವದಿಲ್ಲ. ಹರಿಹರಿ ಅನ್ನುತ್ತ ಮೂಲೆ ಹಿಡಿಯುತ್ತೇನೆ. "

" ಅದು ಒಳ್ಳೆಯದು. "

ಮೂರು ಸಂಜೆಯಾದರೂ ಸುಬ್ಬಣ್ಣ ಬರಲಿಲ್ಲವೆಂದು ಹೊರಟೆ. ಸಾಯಲು ಬಿದ್ದ ಮೊಮ್ಮಗನಿಗೆ ಅಂಬೋಡೆಯ ಚೂರನ್ನು ಕೊಟ್ಟ ಅಜ್ಜಿಯ ಕರುಳಿನ ಘನತೆಯನ್ನು ನೆನೆದು ನಕ್ಕೆ.

---

# ಸುಭದ್ರೆ

"ಸುಭದ್ರೆ, ನೀನು ಎಂದು...." ದೈನ್ಯವಾಣಿಯಿಂದ ಕೇಳಿಕೊಂಡ ಶ್ರೀಧರ.

"ತಡೆ ಶ್ರೀಧರ. ಹ್ಞ. ಹತ್ತಿರ ಬರಬೇಡ. ಪ್ರತಿಯೊಂದು ಕಾರ್ಯಕ್ಕೂ ಮುಹೂರ್ತ ಬರಬೇಕು; ಸ್ವಲ್ಪ ಕಾಲ ತಡೆ. ಒಮ್ಮೆ ಹೇಳಿದೆ: ನಾನು ನಿನ್ನವಳೆಂದು. ನಂಬಿಕೊ."

"ಎಷ್ಟು ದಿನ ಈ ನಿನ್ನ ಮಾತೊಂದನ್ನೇ ನಂಬಿಕೊಂಡಿರುವದು ? ಹತ್ತಿರ ಹಾಯಗೊಡುವದಿಲ್ಲ ನೀನು."

"ಸಮಯ ಬರಲಿ ಶ್ರೀಧರ....ಛೆ. ನಾಲ್ಕು ಹೊಡೆದು ಬಿಟ್ಟಿತು. ಇನ್ನು ನಾನು ಹೊರಡುತ್ತೇನೆ."

"ನಾಳೆ ಬರುವಿಯಲ್ಲ ?"

"ಬರದೆ ?...."

ಏನೋ ನೆನಪಾಗಿ ಹತ್ತು ಹೆಜ್ಜೆ ಹೋದವಳು ಹಿಂದಿರುಗಿ ಬಂದು "ಮರತೇ ಹೋಯಿತು. ಮುದ್ದಾಂ ಕೇಳಬೇಕೆಂದು ಮಾಡಿಕೊಂಡಿದ್ದೆ...."

"ಗೊತ್ತಾಯಿತು ಬಿಡು. ಎಷ್ಟು ?"

"ಹತ್ತು ಸಾಕು."

"ನನ್ನಿಂದ ಮಾತ್ರ ನೀನು ಸುಲಿದುಕೋ. ನೀನು ಮಾತ್ರ...."

"ಬೇಡ. ಕೊಡುವದು ಬೇಡ. ನಾನು ದರಿದ್ರೆಯೆಂದು ನಿನ್ನ ಹೇಳಿಕೆಯಲ್ಲವೇ ? ಆಗಲಿ." ಕೋಪಿಸಿಕೊಂಡವಳಂತೆ ನಟಿಸಿದಳು.

"ಸುಭದ್ರಾ...." ಹಣಕೊಡುವ ನೆವದಿಂದಾದರೂ ಅವಳನ್ನು ಮುಟ್ಟಲು ಯತ್ನಿಸಿದ ಶ್ರೀಧರ. ಆದರೆ ಪ್ರಯೋಜನವಾಗಲಿಲ್ಲ. "ಎಂಟಿದೆ. ನಾಳೆ ಬಾ ಮತ್ತೆರಡು ಕೊಡುವೆ !" ಒಂದು ಅರೆನಗೆಯ ಪ್ರತ್ಯುಪಕಾರ ನೀಡಿದಳು ಸುಭದ್ರೆ.

'ಜಂಬದ ಚೀಲ' ( Vanity bag ) ದಲ್ಲಿ ನೋಟು ತುರುಕುತ್ತ ಅವಳು ಗೇಟು ದಾಟಿದಳು.

"ಬಹಳ ಪಕ್ಕಾ ! ಹತ್ತಿರ ಹಾಯದೆಯೇ ನನ್ನ ಸುಲಿಗೆ ನಡಿಸಿದ್ದಾಳೆ." ಕಿಡಕಿಯಿಂದ ಸುಭದ್ರೆಯು ಹೋಗುವುದನ್ನೇ ನೋಡುತ್ತ ಅಂದುಕೊಂಡ ಶ್ರೀಧರ.

* * * *

"ಧಾಂದಲೆ ಹಾಕಬೇಡಿ. ಏನೋ ಅಂಗಿ ತಂದು ಹತ್ತು ನಿಮಿಷ ಆಗಲಿಲ್ಲ ಈಗಲೇ ಇಷ್ಟು ಕೆಸರು....ಸುಮ್ಮಗಿರು ಕಮಲು. ನಾಳೆ ನಿನಗೆ ಅಣ್ಣನ ಅಂಗಿ ಗಿಂತ ಚೆಂದದ ಗೌನು ತಂದುಕೊಡುತ್ತೇನೆ. ಸುಮ್ಮನಿರು ಮಗು."

"ಆಯಿ, ಅಪ್ಪ ಬಂದ !....ಅಪ್ಪ, ನಂಗೆ ಹೊಸಂಗಿ ತಂದಾಳೆ ಆಯಿ!...." ಗೋಪಾಲ ಕುಣಿಯುತ್ತ ಹೋಗಿ ತಂದೆಯನ್ನು ಇದಿರುಗೊಂಡು ಬಂದ.

ನಿತ್ಯದಂತೆ ಗಂಡನ ಕೋಟು ಕಳಚಿ ಒಳಗೆ ಕರೆದೊಯ್ದು ಚಹ ಸೋಸಿದಳು ಸುಭದ್ರೆ. ತಾಯಿಯು ಮಗನನ್ನು ಉಪಚರಿಸುವ ಅವಳ ಬಗೆಗೆ ಶ್ರೀಪತಿ ಮಾರುಹೋಗಿದ್ದ. ದಣಿದು ಬರುವ ಜೀವಕ್ಕೆ ಬೇಕಾದುದೂ ಅದೇ ಆಗಿತ್ತು.

"ಇಂದು ಶ್ರೀಧರರಾಯನಿಗೆ ಎಷ್ಟು ನಾಮ ಹಾಕಿದೆ ?" ಅರೆ ನಗೆಯಿಂದ ಕೇಳಿದ.

"ಹತ್ತು ರೂಪಾಯಿ ಬೇಕು ಅಂದೆ. ಎಂಟು ಕೊಟ್ಟ. ನಾಳೆ ಮತ್ತೆ ಎರಡು ಕೊಡುವೆನೆಂದಿದ್ದಾನೆ " ತೀರ ಸಹಜವಾಗಿಯೇ ಹೇಳಿದಳು ಸುಭದ್ರೆ.

"ಹಾಗಾದರೆ ನಾಳೆ ನೀನು ಅವನಲ್ಲಿಗೆ ಹೋಗುವವಳು."

"ಹಣ ಬೇಕಾದರೆ ಹೋಗಬೇಕು. ಏನು ಮಾಡಲಿ ?"

"ಸುಭದ್ರೆ, ನನಗೇಕೋ ನೀನು ಹೀಗೆ ಮಾಡುವದು ಸರಿಯೆನಿಸುವದಿಲ್ಲ."

"ಸಂಶಯ ಅಲ್ಲವೇ ?"

"ಸಂಶಯ ಸಹಜವಲ್ಲವೇ ? ಮೇಲಾಗಿ ಜನ ಏನೆಂದುಕೊಂಡಾರು ?"

" ಜನ ಮಣ್ಣು ತಿಂದಿತು. ನಾವು ಹೇಗಿದ್ದರೆ ಅವರಿಗೇನು ? ಅವರೇನೂ ಕೊಟ್ಟು ನಡಿಸಬೇಕಾಗಿಲ್ಲ."

" ಆದರೂ...."

" ನನ್ನಲ್ಲಿ ನಂಬಿಗೆಯಿಲ್ಲ ನಿಮಗೆ. ಆಣೆ ಮಾಡಿ ಹೇಳುತ್ತೇನೆ. ನನ್ನ ಮೈಯನ್ನು ನೋಡುವ ಧೈರ್ಯ ಶ್ರೀಧರನಿಗಿಲ್ಲ. ಏನೋ ನಾನೆಂದರೆ ಅವನಿಗೆ ಮೆಚ್ಚು; ಕೇಳಿದಷ್ಟು ಕೊಡುತ್ತಾನೆ. ಪಾಪ ! ಏನೋ ಆಸೆ ಕಟ್ಟಿಕೊಂಡು ಉದಾರಿಯಂತೆ ನಡೆಯುತ್ತಾನೆ. ಆದರೆ ಅವನು ಬಯಸಿದ ಔದಾರ್ಯ ಈ ಮೈ-ಮನಗಳಿಂದಾಗದು."

" ನೀನು ಅವನನ್ನು ವಂಚಿಸುತ್ತೀ."

" ಜಗತ್ತೇ ಹಾಗೆ ನಡೆದಿದೆ. ಅಲ್ಲದಿದ್ದರೆ ಶ್ರೀಮಂತ ಬಡವನೆಂಬ ಭೇದ ಎಲ್ಲಿರುತ್ತಿತ್ತು ?"

" ನನ್ನ ಮಡದಿ ಹೀಗೆ ಹಣ ತರುವದು ನನಗೇ ಸೇರದು. ನಿನ್ನಲ್ಲಿ ನಂಬಿಗೆಯಿಲ್ಲ ಅಂತಲ್ಲ. ಆದರೂ...."

" ನನ್ನಲ್ಲಿ ನಂಬಿಗೆಯಿದೆ; ನಿಮ್ಮ ಪಗಾರು ತಿಂಗಳಿಗೆ ೩೫ ರೂಪಾಯಿ; ಮನೆಯಲ್ಲಿ ನಾಲ್ಕಾರು ಮಕ್ಕಳು; ನಾನು ಹೀಗೆ ಯುಕ್ತಿಯಿಂದ ಹಣ ತಂದರೆ ನಿಮ್ಮ ಗೌರವಕ್ಕೆ ಭಂಗ. ನೀವೇ ಹೆಚ್ಚು ಹಣ ತನ್ನಿ."

" ಕದ್ದರೆ ಹೆಚ್ಚು ಸಿಗಬಹುದು."

" ಹಾಗಾದರೆ ಸುಮ್ಮನಿರಿ."

" ಬಡತನದಲ್ಲಿಯೇ ಆದರೂ ಮರ್ಯಾದೆಯಿಂದ ಇರಲು ಬರುತ್ತದೆ."

" ಓಹೋ, ನಾನು ತರುವ ಹಣ ನನ್ನ ಮೈ ಒತ್ತಿಯಿಟ್ಟು ಎಂದೇ ನಿಮ್ಮ ಗ್ರಹಿಕೆ ! ನನಗೆ ಅರ್ಧ ಹೊಟ್ಟೆ ಉಂಡು ಇರಲು ಬರುವದಿಲ್ಲ. ನಿಮ್ಮಿಂದ ಹೆಚ್ಚು ತರಲು ಸಾಧ್ಯವಿಲ್ಲ.

" ಸಾಕುಮಾಡು ನಿನ್ನ ಪುರಾಣ ಸುಭದ್ರೆ."

" ಅಯ್ಯೋ ! ೩೫ ಕ್ಕಿಂತ ಒಂದು ಕಾಸು ಹೆಚ್ಚಿಗೆ ಹುಟ್ಟಿಸಲಾಗದವರಿಗೆ ಇಂಥ ಮಾತೆಂದರೆ ಸಿಟ್ಟು. ಸುಮ್ಮನಿರಿ ಯಾಕೆ ಕೋಪಿಸಿಕೊಳ್ಳುವದು?

ನನ್ನಲ್ಲಿ ಸಂಶಯ ? ನಾನು ಪರಪುರುಷನನ್ನು ಬಯಸಿಲ್ಲವೆಂದು ಆಣೆ ಮಾಡಿ ಹೇಳಿದೆ. ನಂಬಿಗೆಯಿಲ್ಲ ನಿಮಗೆ. ನನಗೆ ಒಂದು ವೇಳೆ ಅಂಥ ಚಟ ಇದ್ದರೆ ಹೀಗೆಲ್ಲ ಬಿಚ್ಚಿ ಹೇಳುತ್ತಿದ್ದೆನೇ ? ಹಗಲು ಹನ್ನೆರಡು ತಾಸು ಎಲ್ಲಿಯೋ ಕಚೇರಿಯ ಮೂಲೆಯಲ್ಲಿ ಗೀಚುತ್ತ ಕುಳಿತುಕೊಳ್ಳುವ ನಿಮಗೆ ಅದು ತಡೆಯುವದಾದರೂ ಸಾಧ್ಯವೇ ? ಬೇರೆಯವರ ಮುಂದೆ ಬೆಡಗು ಮಾಡಿ ಅವರಿಗೆ ಟೊಪ್ಪಿ ಹಾಕಿದರೆ ಮಾನ ಕಳೆದುಕೊಂಡಂತಾಯಿತೇ ? ಒಟ್ಟು ಗಂಡಸರಿಗೆ ಮತ್ಸರ. ಆ ಮತ್ಸರದಿಂದ ಎಲ್ಲ ನೀತಿಗಳ ಬೇಲಿ. ಸ್ತ್ರೀಯರಿಗೆ ಸ್ವಾತಂತ್ರ್ಯ ಕೊಡಬೇಕು ಅನ್ನುವವರೂ ನೀವೆ. ಸ್ವಾತಂತ್ರ್ಯ ವಹಿಸಿ ಮರ್ಯಾದೆಯಿಂದಲೇ–ಕೇವಲ ಪ್ರದರ್ಶನದಿಂದಲೇ–ಗಳಿಸಿದರೆ ಹೊಟ್ಟೆ ಕಿಚ್ಚು. ಖರೆಯಾಗಿ ಹೇಳಿ: ನಾನು ನಾಚಿಕೆಗೇಡಿಯಾಗುತ್ತಿದ್ದೇನೆಂಬ ಭೀತಿಯೋ ಅಥವಾ ಶ್ರೀಧರನ ಹುಚ್ಚಿನಿಂದ ಪುರುಷ ಪ್ರಪಂಚಕ್ಕಾಗುವ ಅಪಮಾನಕ್ಕಾಗಿ ಸಿಟ್ಟೋ ?...."

"ಅರೆ ಅರೆ ಅರೆ ! ಏನು ನಿನ್ನ ಭಾಷಣ ! ಥ್ಥ !"

"ಭಾಷಣ ಅಲ್ಲ. ಗೀಷಣ ಅಲ್ಲ. ವಸ್ತುಸ್ಥಿತಿ ಹೇಳಿದೆ. ನೀವು ಎಷ್ಟೇ ಹೇಳಿದರೂ, ಏನೇ ತಿಳಕೊಂಡರೂ, ನೀವು ಹೆಚ್ಚಿಗೆ ಸಂಪಾದಿಸದನಕ ನಾನು ನನ್ನ ಮಕ್ಕಳು ಮನೆಗಾಗಿ ಶ್ರೀಧರನಂಥ ಕೆಲವು ಶ್ರೀಮಂತ ಕುರಿಗಳಿಗೆ ಮಾತಿನ ಸವಿಯನ್ನೇ ಉಣಿಸಿ ಹಣ ತರುವದನ್ನು ನಿಲ್ಲಿಸುವದಿಲ್ಲ. ಸ್ನೇಹದಿಂದ ಒಂದು ಮಾತಾಡಿದರೆ, ಹೀಗೊಮ್ಮೆ ನೋಡಿದರೆ, ಕೇಳಿದಷ್ಟು ರೊಕ್ಕ ಕೊಡುತ್ತಾರೆ ಅವರು. ಇದು ನೀವು ಸಂಶಯ ಪಡುವ ಹಾದರ ಗೀದರ ಏನೂ ಅಲ್ಲ. ತಿಳಿಯಿತೇ ? ಇನ್ನು ಬೇರೆ ಗಂಡಸರೊಡನೆ ಮಾತಾಡಕೂಡದು; ಅವರನ್ನು ನೋಡಲೂ ಕೂಡದು; ಅವರು ಕೊಡುವ ಕಾಣಿಕೆಗಳನ್ನು ತೆಗೆದುಕೊಳ್ಳ ಕೂಡದು— ಅನ್ನಲಿಕ್ಕೆ ಇದೇನೂ ಘೋಷಾಯುಗವಲ್ಲ. ಮಾನ ಮರ್ಯಾದೆಯೆಲ್ಲ ನಮ್ಮ ಕೈಯಲ್ಲೇ ಇದೆ. ಅದು ಬೇರೆಯವರ ಹಾ ಪೂಗಳಿಂದ ಹಾರಿ ಹೋಗುವ ಹಕ್ಕಿಯಲ್ಲ........"

"ಛೆ. ಛೆ. ಛೆ. ತಾರಾ ಮಂಡೋದರಿಗಳೇ ಎಲ್ಲಾ !"

"ಎಲ್ಲ ಗಂಡಸರೂ ಭೀಮಾರ್ಜುನರೇ ಹಾಗಾದರೆ !"

“ ಚಹ ಆರಿಹೋಯಿತು. ಕುಡಿಯಲೇ ಇಲ್ಲವಲ್ಲ. ಬೇಡ. ಆರಿತ ಅದು; ಹೊಸದಾಗಿ ಮಾಡಿಕೊಡುತ್ತೇನೆ. ಅಷ್ಟರಲ್ಲಿ ನೆತ್ತಿಗೆ ಇಷ್ಟು ಎಣ್ಣೆ ಹಾಕಿಕೊಳ್ಳಿ. ಬೆಳಿಗ್ಗೆ ತಡವಾಯಿತೆಂದು ಸ್ನಾನ ಮಾಡದೆ ಹೋದಿರಿ. ಮೈಯೆಲ್ಲ ನೋವು ಅನ್ನುತ್ತಿದ್ದಿರಿ. ಎಣ್ಣೆ ಹಚ್ಚಿ ತಿಕ್ಕಿ ಕೊಡುತ್ತೇನೆ. ನೀರು ಕಾದಿದೆ. ಬಿಸಿ ಬಿಸಿ ಮಿಂದರೆ ಮೈ ಹಗುರವಾಗುತ್ತದೆ. ”

“ ಇಷ್ಟೆಲ್ಲ ಆರೈಕೆ ಬೇಡ ನನಗೆ........ ”

“ ಬೇಡ ಅಂದರೆ. ಅದೆಲ್ಲ ಸಾಧ್ಯವಿಲ್ಲ.”

“ ನನ್ನ ತಲೆ ಕಿವಿಗಳಿಗೆ ಎಣ್ಣೆ ಹಾಕಿಕೊಳ್ಳಲಿಕ್ಕೆ ನಿನ್ನ ಒತ್ತಾಯವೇಕೆ?

“ ಒತ್ತಾಯವೇ. ನಾನು ಕೇಳುವವಳಲ್ಲ. ಕುಳಿತುಕೊಳ್ಳಿ ಅಂದರೆ....”

“ ಬೇಡ. ”

“ ನನ್ನಾಣೆಯಿದೆ........ ”

ಸುಭದ್ರೆ ಬಿಡಲೇ ಇಲ್ಲ. ಗಂಡನಿಗೆ ಚಹ ಕುಡಿಸಿ, ಎಣ್ಣೆ ಹಚ್ಚಿ ತಿಕ್ಕಿ ಮೀಯಿಸಿ ಮಲಗಿಸಿದಳು. ಮಕ್ಕಳು ಆಡುತ್ತ ಬಂದವು. ಅವರನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಗಂಡನೊಡನೆ ಹರಟುತ್ತ ಕುಳಿತಳು.

“ ಸುಭದ್ರೆ, ನೀನು ನಾಳೆಯಿಂದ ಶ್ರೀಧರನ ಮನೆಗೆ ಹೋಗಕೂಡದು.”

“ ಅಷ್ಟು ನಿಮ್ಮ ಒತ್ತಾಯವಿದ್ದರೆ ಹೋಗುವದಿಲ್ಲ, ಆಯಿತೇ ? ನನ ಗೇನು ?

“ ಸಿಟ್ಟು ಬಂತೇ ? ”

“ ಸಿಟ್ಟೂ ಇಲ್ಲ. ಗಿಟ್ಟೂ ಇಲ್ಲ. ಆಗುವದೆಲ್ಲ ಆಗಲಿ. ನೋಡಲಿಕ್ಕೆ ನೀವು ಇದ್ದೀರಲ್ಲ. ”

ಶ್ರೀಪತಿಗೆ ಏನು ಹೇಳಬೇಕೆಂಬುದೇ ಹೊಳೆಯಲಿಲ್ಲ. ಸುಭದ್ರೆ ಸೆಟೆದು ಕೊಂಡು ಕುಳಿತಳು.

ಕೆಲಹೊತ್ತಿನ ಮೇಲೆ ಶ್ರೀಪತಿಯೇ ಮಾತೆತ್ತಿದ. “ ನನ್ನನ್ನು ಮುಟ್ಟಿ ಹೇಳು ಸುಭದ್ರೆ, ನೀನು ಪವಿತ್ರೆ ಅಂತ. ”

" ನಿಮ್ಮನ್ನಲ್ಲಿ, ಉರಿಯುವ ಬೆಂಕಿಯನ್ನು ಬೇಕಾದರೂ ಹಿಡಿದು ಹೇಳುತ್ತೇನೆ. ನಾನು ಪವಿತ್ರೆ. ನನ್ನ ಮನಸು ತನು ನಿಮ್ಮನ್ನು ಬಿಟ್ಟು ಇನ್ನೊಬ್ಬ ರನ್ನು ಸೋಕಿಲ್ಲ. "

" ನಿಜವಲ್ಲ ?"

" ಸತ್ಯ."

" ಸುಳ್ಳಾಡಿದರೆ ನಾಲಿಗೆ ಉದುರೀತು."

" ದೇವರ ಕಣ್ಣಿನಲ್ಲಿ ನಾನು ಯೋಗ್ಯಳಾಗಿದ್ದೇನೆ. ಆದರೆ ಯಾರಿಂದ ನಾನು ಹಣ ತರುತ್ತೇನೆಯೋ ಅವರೆದುರು ನಟನೆ ಮಾಡುತ್ತೇನೆ."

" ಹಾಗಾದರೆ ನಿನ್ನ ಮನಸ್ಸಿಗೆ ಬಂದಂತೆ ಮಾಡು."

" ಮಾನಕ್ಕೆ ಕುಂದು ಬರದಿದ್ದರಾಯಿತೋ ಇಲ್ಲೋ ?"

---

# ತಾರಾ

ಆ ಸಂಗತಿ ನಡೆದು ಒಂದು ವರುಷವಾಗಿ ಹೋದರೂ ವೆಂಕಣ್ಣನ ತಲೆಯಿಂದ ಅದು ತುಸುವೂ ಮಾಸದು. ಏತಕ್ಕೂ ಇಲ್ಲದೆ ಒಂದು ಕೆಟ್ಟ ಹೆಸರು ಬಂದಿತೆಂದು ಅವನು ಬಹಳ ನೊಂದುಕೊಂಡಿದ್ದಾನೆ. ಇಂದಿಗೂ ಆ ಸಂಗತಿಯನ್ನು ಹೇಳಿ ತನಗೆ ಬೊಟ್ಟುಮಾಡಿ ತೋರಿಸುವವರಿದ್ದಾರೆ; ತಾನು ಆಣೆ ಮಾಡಿ ಹೇಳಿದರೂ ಜನ ನಂಬುವದಿಲ್ಲ; ಏನೋ ಪೂರ್ವಜನ್ಮದ ಪಾಪ ಕಾಡುತ್ತದೆ—ಎಂದು ಅವನು ಹಲಬಿಕೊಳ್ಳುತ್ತಾನೆ.

ಒಂದು ಹೆಣ್ಣು ಒಬ್ಬನನ್ನು ನಾಚಿಕೆಗೇಡು ಮಾಡುವದು ಎಷ್ಟು ಸುಲಭ! ತನ್ನ ಮೈಮೇಲೆ ಕೈಮಾಡಿದನೆಂದು ಕೂಗಿದರೆ ಸಾಕು. ಜನ ನಂಬಿಬಿಡುತ್ತದೆ. ಆದರೆ ಗಂಡಸು ಸತ್ಯವನ್ನೇ ಹೇಳಿದರೂ ನಂಬುವದಿಲ್ಲ. ಎಲ್ಲಿಯವರೆಗೆ ಜಗ ಹೆಣ್ಣನ್ನು ಪೂಜಿಸುವದೋ ಅಲ್ಲಿಯವರೆಗೆ ಈ ಬಗೆಯ ಕೊಳಕು ತಪ್ಪಿದ್ದಲ್ಲ....ಹೆಣ್ಣು ಗಂಡಸಿನ ಸರಿಸಮಾನಳೆಂದು ಒಪ್ಪಿಕೊಂಡು ನಡೆಯಬಹುದು. ಆದರೆ ಅವಳನ್ನು ಪೂಜಿಸುವದರಲ್ಲಿ ಅರ್ಥವಿಲ್ಲ. ಅವಳ ಅಬಲತೆಯನ್ನೇ ತನ್ನನ್ನು ಇರಿಯುವ ಕೋಡನ್ನಾಗಿ ಮಾಡಿಕೊಂಡ ಗಂಡು !....ಆರಾಮ ಕುರ್ಚಿಯ ಮೇಲೆ ಕುಳಿತು ಹೀಗೆ ವಿಚಾರಿಸುತ್ತಿದ್ದ ವೆಂಕಣ್ಣ. ಸಿಗರೇಟಿನ ತಿಳಿ ಹೊಗೆ ಕೋಣೆಯಲ್ಲೆಲ್ಲ ಹಬ್ಬಿತ್ತು. ಅವನ ತಲೆ ಶಾಂತವಾಗುವ ಮುಂಚೆಯೇ ಅವನ ಹೆಂಡತಿ “ನೋಡಿದಿರಾ, ಮದುವೆಯಾಗಿ ಇನ್ನೂ ವರ್ಷವಾಗುವದಕ್ಕಿಂತ ಮುಂಚೆ ವಿಧವೆಯಾದಳು ನಿಮಗೆ ಕಲಂಕ ತಂದ ತಾರಾ! ದೇವರು ಯೋಗ್ಯ ಶಿಕ್ಷೆ ಕೊಡದೆ ಬಿಡುತ್ತಾನೆಯೇ ?” ಅನ್ನುತ್ತ ಬಂದಳು.

“ ಏನು ತಾರೆಯ ಗಂಡ ತೀರಿಕೊಂಡನಂತೇ ? ”

“ ಹೌದು. ಈಗಷ್ಟೆ ಶಾಮರಾಯರ ಮನೆಯಲ್ಲಿ ಹೇಳುತ್ತಿದ್ದರು. ”

“ ದೇವರು ಕಟುವಾಗಿ ಶಿಕ್ಷಿಸಿದ....ಇನ್ನು ಏನೇನು ಮಾಡುವಳೋ ಮಾಮುಂಡೆ.... ”

“ ಯಾರ ಬೆನ್ನಿಗಾದರೂ ಹೋಗುತ್ತಾಳೆ. ಮತ್ತೇನು ಅವಳು ಮಾಡು ವದು ? ”

“ ಒಬ್ಬನ ಬೆನ್ನಿಗೆ ಹೋದರೆ ಚಿಂತೆಯಿಲ್ಲ. ಮತ್ತೆ ಒಬ್ಬನಿಂದ ಪಾಪ ಹೊತ್ತು ಅದನ್ನು ಇನ್ನೊಬ್ಬನಿಗೆ ಹೇರಿ ನನಗೆ ಮಾಡಿದಂತೆ ಮಾಡಬಾರದು. ”

“ ಹೋಗಲಿ ಅವಳು ಹಾಳು ಬಾವಿಗೆ ಬಿದ್ದು, ಪಾಪ ಅವಳ ಗಂಡ ಕಲ್ಲುಬಂಡೆಯ ಹಾಗಿದ್ದ. ಏನಾಯಿತೋ ಏನೊ. ಹೆಂಡತಿಯ ಚರಿತ್ರೆ ಕೇಳಿ ಮನಸ್ಸಿಗೆ ಹಿಡಿಸಿಕೊಂಡಿರಬಹುದೇ ? ”

“ ಚರಿತ್ರೆ ಕೇಳುವವೇನು ? ಮದುವೆಯ ಮುಂಚೇ ಕೇಳಿದ್ದ. ಯಾರ ಮುಂಗೋ ಹೇಳಿದ್ದನಂತಲ್ಲ—ತನ್ನ ಹೆಂಡತಿ ಅಂಥವಳಾದರೆ ತಾನೂ ಶುಭಗ ನೇನಲ್ಲ; ಒಳ್ಳೇ ಜೋಡಿಯಾಯಿತು ಅಂತ. ತಿಳಿದೂ ತಿಳಿದೂ ಮದುವೆಯಾ ಗಿದ್ದ ಅವ. ”

“ ತಿಳಿದೂ ತಿಳಿದೂ ಸತ್ತುಕೊಂಡನೋ ಏನೋ ಅಂದೆ.”

“ ಮದುವೆಯಾದ ಮೇಲೂ ಅವಳು ಅಡ್ಡ ಹಾದಿ ಹಿಡಿದಿದ್ದರೆ ಅವ ಳನ್ನೇ ಸೀಳುವ ಪೈಕಿ ಅವ.”

“ ಅಂತಹದೇನಾದರೂ ಇದ್ದರೆ ಸುದ್ದಿ ಹಬ್ಬದೇ ಹೋಗುತ್ತದೆಯೋ ?”

× × × ×

“ ಯಾರು ಅದು ?”

“ ನಾನು.”

“ ನಾನು ಅಂದರೆ ”

“ ತಾರಾ ”

ಹೊರಗೆ ಬಾಗಿಲು ಬಡಿಯುತ್ತ ನಿಂತಳು ಅವಳು.

“ ಬಾಗಿಲು ತೆರೆಯಬೇಡಿ. ನಿಮಗೆ ಮತ್ತೆ ಏನು ಮಾಡಬಂದಿದ್ದಾಳೋ ಏನೋ ಮಾರಿ ” ಪಿಸು ಮಾತಿನಿಂದ ಗಂಡನನ್ನು ತಡೆದಳು ಯಮುನೆ.

ಆದರೆ ವೆಂಕಣ್ಣ ದೀಪ ಹಿಡಿದು ಬಂದು ಬಾಗಿಲು ತೆರೆದ. ಕಣ್ಣೀರು ಸುರಿಸುತ್ತ ನಿಂತಿದ್ದಾಳೆ ತಾರೆ.

ಗಂಡ ಹೆಂಡರಿಬ್ಬರೂ ಅವಳನ್ನು ಒಳಗೆ ಕರೆದೊಯ್ದು ಕೂಡ್ರಿಸಿ “ ಇಷ್ಟು ರಾತ್ರೆಯಲ್ಲೇಕೆ ಬಂದದ್ದು ?” ಎಂದು ಕೇಳಿದರು. ಬಿಕ್ಕಿ ಬಿಕ್ಕಿ

ಅಳುವುದೇ ಅವಳ ಉತ್ತರವಾಯಿತು. ಯಮುನೆಯು ಅವಳ ಮೋರೆಯ
ನ್ನೆತ್ತಿ ಸೆರಗಿನಿಂದ ಕಣ್ಣೊರಸಿ " ಯಾಕೆ ತಾರಾ ಅಳುವದು ? ಏನು ? ಹೇಳು.
ಅವರಿಗೆ ಏನಾದರೂ ಹೇಳಬೇಕಾಗಿದೆಯೋ ?"

ಗಂಡ ಹೆಂಡರಿಬ್ಬರೂ ಪ್ರಯತ್ನಪಟ್ಟು ಅವಳನ್ನು ಸಂತೈಸಿದ ಮೇಲೆ
ಅಳುವದನಿಯಲ್ಲಿ " ನನ್ನನ್ನು ಕ್ಷಮಿಸಿ " ಎಂದು ಅವರಿಬ್ಬರ ಕಾಲಿಗೂ ಎರಗಿ
ದಳು. ಯಮುನೆಯು ಅವಳನ್ನು ಹಿಡಿದು ಎತ್ತಿದಳು.

" ವೆಂಕಣ್ಣ ಮಾಸ್ತರರೆ....ನನ್ನನ್ನು ಕ್ಷಮಿಸಿ. ದೇವರು ನನ್ನ ತಪ್ಪಿಗಾಗಿ
ಶಿಕ್ಷೆ ಕೊಟ್ಟಿದ್ದಾನೆ. ನಿಮ್ಮ ಮೇಲೆ ಸಲ್ಲದ ಆರೋಪ ಹೇರಿದ್ದಕ್ಕಾಗಿ ನನಗೆ
ಈ ಗತಿ ಒದ್ದಿದ್ದಾನೆ. ನೀವು ನನ್ನಿಂದಾಗಿ ಜನರ ಬಾಯಿಗೆ ಬಿದ್ದಿರಿ. ನೀವು
ನನ್ನ ಅಂದಿನ ಪಾಪಕ್ಕೆ ಕಾರಣರಲ್ಲ " ಮತ್ತೆ ಅವಳ ಕಣ್ಣು ಕೋಡಿಹರಿಸ
ಹತ್ತಿತು. " ನನ್ನ ಸಹಪಾಠಿಯೊಬ್ಬನ ಬಲೆಗೆಬಿದ್ದು ಪಾಪ ಕಟ್ಟಿಕೊಂಡೆ.
ಏನು ಮಾಡಬೇಕೆಂಬುದು ತಿಳಿಯಲಿಲ್ಲ. ಆ ನನ್ನ ಗೆಳೆಯನನ್ನೇ ಕೇಳಿದೆ.
ಅವನೇ ಹೇಳಿಕೊಟ್ಟ ಉಪಾಯ ಅದು. ನಿಮ್ಮನ್ನು ಖಾಸಗೀ ಶಿಕ್ಷಣಕ್ಕಾಗಿ
ನೇಮಿಸಿಕೊಳ್ಳಲು ತಂದೆಯವರಿಗೆ ಒತ್ತಾಯ ಮಾಡಿದೆ. ಮನೆಯವರಿಗೂ
ನನ್ನ ಪಾಪದ ಅರಿವಾಯಿತು. ಹೊರಗೆ ಹಾಕುವೆವೆಂದು ಅಬ್ಬರಿಸಿದರು.
ನಿಮ್ಮ ಮೇಲೆ ಆರೋಪಮಾಡಿಬಿಟ್ಟೆ. ನಿಮ್ಮ ಮಾನ ಹಾನಿಯಾಗುವಾಗ
ಒಂದೆರಡು ಸಲ ನಾಲಿಗೆ ಎದ್ದಿತು. ಆದರೆ ಏಕೋ ಸತ್ಯ ಹೇಳಲು ಧೈರ್ಯ
ಸಾಲಲಿಲ್ಲ...."

" ಇದೆಲ್ಲ ನನಗೆ ಗೊತ್ತಿದ್ದ ವಿಷಯವೇ ! ಮತ್ತೇಕೆ ಅದರ ಪಠನ
ನಮ್ಮ ಮುಂದೆ, ಇಂಥ ಅಪರಾತ್ರಿಯಲ್ಲಿ ? "

" ನಿಮ್ಮೆದುರಿಗೆ ನನ್ನ ತಪ್ಪು ಒಪ್ಪಿಕೊಂಡನಕ ನನ್ನ ಮನಸ್ಸು ಹಗು
ರಾಗದು. ನೋಡಿ, ಈಗ ನನ್ನ ದುಗುಡ ಅರ್ಧದಷ್ಟು ಇಳಿಯಿತು ! "

" ಈಗ ಇಳಿದಷ್ಟು ಭಾರವನ್ನು ಇನ್ನು ಯಾರಿಂದಾದರೂ ಹೇರಿ
ಕೊಂಡು ಬಿಡು. ಅಂದರೆ ಸರಿಯಾಗುವದು ! "

" ಚುಚ್ಚಬೇಡಿ ದಮ್ಮಯ್ಯ. ಇನ್ನು ನಾನು ಎಂದಿಗೂ ಇಂಥ ಕೆಲಸ
ಮಾಡುವದಿಲ್ಲ. "

“ ಕಲಿಯುವಾಗಲೇ ಗುರುವಿನ ಮೇಲೆ ಅಪವಾದ ಹೇರಿದವಳು ಇನ್ನು ಯಾರಾರಿಗೆ ಏನೇನು ಮಾಡಿಸಲಿರುವೆಯೋ ! ”

“ ನಿಮ್ಮ ಪಾದ ಮುಟ್ಟಿ ಹೇಳುತ್ತೇನೆ.... ” ಅನ್ನುತ್ತ ಅವಳು ಹಾಗೇ ಮಾಡಹೋದಳು. ”

“ ಇದೆಲ್ಲ ನಿಮ್ಮನ್ನು ಮಂಕುಗೊಳಿಸುವ ಕ್ರಮ ” ಮತ್ಸರದ ನೊಸ ಯನ್ನು ಹಿರಿದಳು ಯಮುನೆ.

“ ಮರ್ಯಾದೆ ಕಳೆದುಕೊಂಡು ಸಾಕಷ್ಟು ಮಂಕು ಹಿಡಿದಿರುವಾಗ ಮತ್ತೆ ಮಂಕುಗೊಳಿಸುವದೇನಿದೆ....ರಾತ್ರಿ ಬಹಳವಾಯಿತು ಇನ್ನು....”

“ ಹೋಗುತ್ತೇನೆ. ನನ್ನನ್ನು ಕ್ಷಮಿಸಿದಿರಲ್ಲ ? ”

“ ನಿಸ್ಸಹಾಯವಾಗಿ ಜನರ ಬಾಯಿಗೆ ಬಿದ್ದಾಗಲೇ ನಿನ್ನನ್ನು ಪ್ರಾರ್ಥಿ ಯಾಗಿ ಕ್ಷಮಿಸಿದ್ದೇನೆ ! ಇನ್ನುಮೇಲಾದರೂ ನೀನು ನನ್ನಂಥ ಬಡವರ ಮಾನಕ್ಕೆ ಮಸಿಹಚ್ಚದಿದ್ದರೆ ಸಾಕು.”

ತಾರೆಯು ಕತ್ತಲಲ್ಲಿ ಮಾಯವಾದಳು. ಯಮುನೆಯು ಬಾಗಿಲು ಹಾಕಿಕೊಂಡು “ ಈ ಹೊತ್ತು ಬೇಕಾದರೆ ಅವಳನ್ನು ಬಯಲಿಗೆ ತರಲು ಬರು ತ್ತಿತ್ತು” ಅಂದಳು.

“ ಹೇಗೆ ?”

“ ಅವಳು ಒಳಗೆ ಬಂದಕೂಡಲೆ ಹೋ ಎಂದು ಕೂಗಿ, ಗಂಡ ಸತ್ತ ನೆಂದು ನಿಮ್ಮ ಬೆನ್ನು ಹತ್ತಿದಳೆಂದು ಕೇರಿಯವರಿಗೆ ಹೇಳಿದರೆ....”

ವೆಂಕಣ್ಣನಿಗೆ ನಗೆ ತಡೆಯಲಾಗಲಿಲ್ಲ.

“ ಹುಚ್ಚು ! ‘ಇವರೇ ಮಧ್ಯರಾತ್ರಿಯ ಮೇಲೆ ನನಗೆ ಬಾ ಅಂದಿದ್ದರು’ ಎಂದು ಅವಳು ನನ್ನ ಕಡೆಗೆ ಬೊಟ್ಟು ಮಾಡಿ ಬಿಟ್ಟರೆ ತೀರಿತು. ಮೊದಲಿನ ಅಪವಾದಕ್ಕೆ ಬಲ ಸಿಕ್ಕ ಹಾಗೆ. ಜಗತ್ತು ಹೆಂಗಸರ ಮಾತನ್ನು ಸುಲಭವಾಗಿ ನಂಬುತ್ತದೆ. ”

“ ನಾನು ಇರುವಾಗ ಹಾಗೆಲ್ಲ ಅವಳು ಹೇಳುವದಾಗಲಿ, ಜನರು....”

“ ನಿನ್ನ ಮಾತಿಗೆಲ್ಲಿ ಬೆಲೆ ? ಹಿಂದೆ ಅಪವಾದ ಬಂದಾಗಲೂ ನೀ ಇದ್ದೆ. ಗಂಡಸಿಗೆ ಹಲವು ಹೆಣ್ಣುಗಳ ಚಪಲ ಎಂಬ ಸಿದ್ಧಾಂತವಿರುವಾಗ ನಿನ್ನ ಸಾಕ್ಷಿ ಫುಸ್.”

"ಗಂಡಸಿಗೆ ಅಂಥ ಚಪಲ ಇರುವದು ನಿಜವೇ ?" ದೀಪ ಆರಿಸಿ ಮಲಗಿಕೊಂಡರೂ ಅವರ ಮಾತುಕತೆ ಮುಗಿಯಲಿಲ್ಲ.

"ಒಮ್ಮೆ ಅಂಥ ಚಟ ಬಿದ್ದಿತೆಂದರೆ ಗಂಡಸೂ ಹಾಗೇ ಹೆಂಗಸೂ ಹಾಗೇ."

"ಅದು ಹೋಗಲಿ. ಅಲ್ಲ, ರಾತ್ರಿ ಇಲ್ಲೇ ಇರು ಅಂತ ಹೇಳಲಿಲ್ಲವೆಂದು ಆ ಮುಂಡೆ ನಿಮ್ಮ ಮೇಲೆ ಹಗೆತನ ಸಾಧಿಸಿ ಮತ್ತೇನಾದರೂ ಮಾಡಬಹುದೇ ?"

"ಅಯ್ಯೋ. ಹೆಣ್ಣು ಒಮ್ಮೆ ವಿಧವೆಯಾಯಿತೆಂದರೆ ಜನ ಅವಳ ಪಕ್ಷ ಕಟ್ಟುತ್ತಾರೆಂದು ತಿಳಿದಿದ್ದೀಯಾ ?"

ಯಮುನೆ ಏನೋ ವಿಚಾರಕ್ಕೆ ಬಿದ್ದು ಸುಮ್ಮನಾದಳು. ಹಾಗೇ ಅವಳಿಗೆ ನಿದ್ದೆ ಹತ್ತಿತು.

---

# ಕ್ಷಮೆ

ಶೇಖರನಿಗೆ ಇನ್ನೂ ಎರಡು ದಿನಗಳ ‘ವಾರ’ ಕಡಿಮೆ ಬಿದ್ದಿತ್ತು. ಎಲ್ಲಿಯೂ ಹುಟ್ಟುವಂತೆ ತೋರಲಿಲ್ಲ. ಶ್ರೀಮಾನ್ ಪದ್ಮನಾಭ ಹೆಬ್ಬಾರರ ಮನೆಯಲ್ಲಿ ಕೇಳಬೇಕೆಂದು ನಾಲ್ಕಾರು ಸಲ ಯೋಚಿಸಿದ. ಆದರೆ ಅವರು ಭಿಕ್ಷುಕರನ್ನೂ, ವರ್ಗಣಿ ಕೇಳುವವರನ್ನೂ ವಾರದ ಮಾಣಿಗಳನ್ನೂ ಅಂಗಳಕ್ಕೂ ಬರಗೊಡುವದಿಲ್ಲವೆಂದು ಕೇಳಿದ್ದನಾದುದರಿಂದ ಹಿಂದೆ ಮುಂದೆ ನೋಡಿದ. ಹಸಿವೆಯೆಂದರೆ ಹಾಗೇ. ಎಲ್ಲಿಂದಲೋ ಶೇಖರನಿಗೆ ಧೈರ್ಯ ಬಂದಿತು. ಅಂದೇ ವಾರವೂ ಇತ್ತಿಲ್ಲ. ಖಾನಾವಳಿಗೆ ಹೋಗಿ ಉಂಡುಬರಲು ಕಾಸೂ ಇತ್ತಿಲ್ಲ. ಬೆಳಗಿನಿಂದ ಹೊಟ್ಟೆಯಲ್ಲಿ ನೀರು, ಬರೀ ನೀರು.

ದಣಪೆಯನ್ನು ದಾಟಿ ಅಂಗಳಕ್ಕೆ ಕಾಲಿಡುವಾಗಲೇ ಹೆಬ್ಬಾರರ ಗುಡುಗು ಕೇಳಿಬಂತು— “ಯಾರದು ?”

“ನಾನು” ಮೆಲ್ಲಗೆ ನುಡಿದ ಶೇಖರ. ಅವನ ಎದೆ ಟುಕುಟುಕು ಅನ್ನುತ್ತಿತ್ತು. ಕಾಲು ಸಾವಕಾಶವಾಗಿ ಹೊಳ್ಳಿಯನ್ನು ಸಮೀಪಿಸಿತು.

“ನಾನು ಅಂದರೆ ?”

“ವಿದ್ಯಾರ್ಥಿ”

“ಇದು ಸಾಲೆಯಲ್ಲ”

“ಗೊತ್ತಿದೆ. ಆದರೆ ನನಗೆ ಒಂದು ದಿನ ವಾರ........”

“ಓಹೋ ! ಪಿತೃಗಳು ಮಾಡಿಟ್ಟು ಹೋದ ಆಸ್ತಿಯ ಹಕ್ಕೆಂದು ತೋರುತ್ತದೆ ವಾರ ಇವರಿಗೆ”

“ಒಂದೇ ದಿನ ಉಳಿದಿದೆ.”

“ಎಲ್ಲರಿಗೂ ಹಾಗೇ; ಇನ್ಶೂರನ್ಸ ಏಜಂಟರಿಗೆ ಒಂದು ಲಕ್ಷ ಆಗಲು ಒಂದೇ ಸಾವಿರ ಕಡಿಮೆ ! ವಾರದ ಮಕ್ಕಳಿಗೆ ಏಳೂ ದಿನ ಆಗಲಿಕ್ಕೆ ಒಂದೇ ದಿನ ಕಡಿಮೆ ! !........”

" ಸತ್ಯಕ್ಕೂ ಇದೊಂದೇ ದಿನ........ "

" ಸಾಧ್ಯವಿಲ್ಲವೆಂದು ಸ್ಪಷ್ಟ ಹೇಳಿದತನಕ ತಿಳಿಯುವದಿಲ್ಲವೇ ? "

" ಹಳ್ಳಿಯವ ನಾನು. ಏನೋ ನಾಲ್ಕು ಅಕ್ಷರ ಕಲಿತು ಹೋಗುವ ಅಂತ ಬಂದಿದ್ದೇನೆ "

" ಎಲ್ಲರಿಗೂ ಈಗ ಇಂಗ್ಲೀಷು ಕಲಿಯುವದೊಂದು ಚಟ. ತಾವೇನು ? ತಮ್ಮ ಯೋಗ್ಯತೆಯೇನು ? ಇದಾವುದನ್ನೂ ನೋಡುವದೇ ಇಲ್ಲ. ಇಂಗ್ಲೀಷು ಅಂದರೆ ಅಷ್ಟು ಅಗ್ಗವೇ ? ಬಂದು ನಮ್ಮಂಥವರಿಗೆ ಉಪದ್ರ ಕೊಡುವದು. ಇಂಗ್ಲೀಷು ಕಲಿಯದಿದ್ದರೆ ಸಾಯುತ್ತಾರೆಯೇ ? ಅಲ್ಲೊ, ಏ........ ನಿನ್ನ ಹೆಸರೇನು ? '

" ಶೇಖರ "

" ಹುಂ. ಶೇಖರ. ನಿನಗೆ ತಂದೆ, ತಾಯಿ ಮನೆ ಮಾರು ಏನೂ ಇಲ್ಲವೇ ? "

" ತಂದೆ ತಾಯಿ ಇದ್ದಾರೆ. ಒಂದು ತುಂಡು ತೋಟವಿದೆ. ಬಹಳ ಬಡತನ. "

"ಬಡವರಿಗೆ ಇಂಗ್ಲೀಷು ಬರೆದದ್ದಲ್ಲೋ. ಅಲ್ಲ, ನಿನ್ನ ತಂದೆ ಅಷ್ಟಿದ್ದರೆ ಸಾಲಮಾಡಿ ಕಲಿಸಬಾರದೇ ? ಕಲಿತು ನೀನು ಕಲೆಕ್ಟರನಾಗಲಿದ್ದೀಯಾ ? ಹೋಗು ಸುಮ್ಮನೆ. ಮನೆಗೆ ಹೋಗಿ, ಇರುವ ನಾಲ್ಕು ಅಡಿಕೆ ಮರಕ್ಕೆ ಎಲೆಯ ಬಳ್ಳಿ ಹಾಕಿ, ಕೋಡಸ ಹಾಗೆ ಹತ್ತಿ ಕೊಟ್ಟೆ ಕೊನೆ ಮಾಡು. ಹರ ಹರ ಹೇಳಿ, ಗಂಜೀ ಉಂಡು ಸುಖವಾಗಿ ಇರು. ಅದನ್ನು ಬಿಟ್ಟು ಈ ಊರಿಗೆ ಬಂದು "ನಾನು ಬಡವ; ಇಂಗ್ಲೀಷು ಕಲಿಯುತ್ತೇನೆ; ವಾರ ಕೊಡಿ" ಎಂದು ಸಿಕ್ಕ ಸಿಕ್ಕವರನ್ನೆಲ್ಲ ಕಾಡಿದರೆ ಹೇಗೆ ? "

ಶೇಖರನು ಶಿಫಾರಸಿನ ಪತ್ರಗಳನ್ನು ಹೆಬ್ಬಾರರ ಮುಂದಿಟ್ಟನು.

" ಅಯ್ಯೋ, ಈಗಿನ ದಿನದಲ್ಲಿ ಸರ್ಟೀಫಿಕೀಟು ಕೊಡುವವರಿಗೇನು ಕಡಿಮೆ? ನಾನು ಬೇಕಾದರೂ ಬರೆದು ಕೊಡುತ್ತೇನೆ— ಸದ್ರೀ ವಿದ್ಯಾರ್ಥಿಯು ಅತ್ಯಂತ ಬಡವನೂ ಬುದ್ಧಿವಂತನೂ ಇರುತ್ತಾನೆ ಎಂದು ! "

ಶೇಖರ ಚಕಾರ ಮಾತಾಡದೆ ನಿಂತ.

" ಹೋಗಬಹುದು "

" ಇದೊಂದು ದಿನವಾದರೂ........ "

" ಆಗುವದಿಲ್ಲ ಅಂದೆನಲ್ಲ "

" ಬಡವರ ಮಕ್ಕಳಿಗೆ ಕಲಿಯುವ ಅಧಿಕಾರವೇ ಇಲ್ಲವೆಂದು ನಿಮ್ಮ ಹೇಳಿಕೆಯೋ ? " ಎಂದು ಕೇಳಬೇಕೆಂದಿದ್ದ. ಆದರೆ ಮಾತಾಡದೆ ಹೋದ ದಾರಿಯಲ್ಲೇ ಮರಳಿದನು. ಕೊಠಡಿಯನ್ನು ಸೇರುವಾಗ ಅವನ ಹೊಟ್ಟೆಯು ಹಸಿವೆಯಿಂದ ಚುಂಯ್ಯಗುಟ್ಟಿತು; ತಲೆ ಕಾದು ಕೆಂಡವಾಯಿತು. ಎರಡೂ ಶಾಂತವಾಗಲೆಂದು ಅವನು ಒಂದು ಬೊಡ್ಡೆ ನೀರು ನೋರಿದ.

× × × ×

ಹಟದಿಂದ ಶೇಖರ ಗ್ರೇಜ್ಯುಏಶನ್ ಮುಗಿಸಿದ. ಆವೇಶದಿಂದ ಅವನು ಕೊನೆಯವರೆಗೂ ಹೋರಾಡಿದ. ಅವನಿಗೆ ಜಯವಾಯಿತು.

ಬಿ. ಎ. ಯಲ್ಲಿ ಹೆಚ್ಚಿನ ಸ್ಥಾನ ದೊರಕಿಸಿದ ಬಗ್ಗಾಗಿ ಅವನ ಸಾಲೆಯವರು ಅವನಿಗೊಂದು ಸತ್ಕಾರ ಕೂಟವನ್ನೇರ್ಪಡಿಸಿದರು. ಊರಿನವರೆಲ್ಲ ಶೇಖರನನ್ನು ಆನಂದದಿಂದ ಬರಮಾಡಿಕೊಂಡರು. " ಬಹಳ ಬಡತನದಲ್ಲಿದ್ದು ....ಇಂಥವನಿಗೆ ನೆರವಾಗುವ ಪುಣ್ಯ ನಮಗೆ ದೇವರು ಕೊಟ್ಟ........"ಎಂದು ಮುಂತಾದಾಗಿ ಆಡಿಕೊಂಡರು.

ಶಂಕರ ಶಾಸ್ತ್ರಿಗಳಲ್ಲಿ ಶೇಖರ ಇಳಿದುಕೊಂಡಿದ್ದ. ಶ್ರೀಮಾನ್ ಪದ್ಮನಾಭ ಹೆಬ್ಬಾರರು ಏನೋ ನೆವಮಾಡಿ ಅಲ್ಲಿಗೆ ಆಗಮಿಸಿದರು. ಮಾತಿಗೆ ಮಾತು ಹೊರಟು ಹೆಬ್ಬಾರರು ತಾವು ಬಂದ ಕಾರ್‍ಯದ ವಿಷಯವನ್ನು ಶಾಸ್ತ್ರಿಗಳ ಮುಖಾಂತರ ಎತ್ತಿಸಿದರು.

ಶೇಖರನಿಗೆ ಒಳಗೊಳಗೆ ನಗುಬಂತು. ಸೇಡು ತೀರಿಸಿಕೊಳ್ಳಬೇಕೆಂಬ ಚಪಲವೂ ಮೂಡಿತು. ಆದರೂ ಸುಮ್ಮನೆ ಕುಳಿತ.

ಹೆಬ್ಬಾರರೇ ಪ್ರಸ್ತಾಪವೆತ್ತಿದರು.

ಈಗ ಬಿಡಕೂಡದೆಂದು ಶೇಖರ ಧೈರ್‍ಯ ಮಾಡಿದ.

ಅವನು ಈ ವಿಷಯ ಮಾತಾಡುವದು ಮೊದಲನೆಯ ಸಲವಾಗಿತ್ತು; ಸ್ವಲ್ಪ ಸಂಕೋಚವಾಗುತ್ತಿತ್ತು. ಆದರೂ ಕೇಳಿದ.

" ಎಷ್ಟು ಶಿಕ್ಷಣ ಕೊಟ್ಟಿದ್ದೀರಿ ? "

" ಓದು ಬರೆಯಲಿಕ್ಕೆ ಬರುತ್ತದೆ. "

" ಸರಿ, ಎಷ್ಟು ಓದಿಸಿದ್ದೀರಿ ಕಾಲೇಜಿನಲ್ಲಿ ? "

" ಕಾಲೇಜಿನಲ್ಲಿ ? "

" ಕಾಲೇಜಿಗೆ ಹಾಕಲೇ ಇಲ್ಲವೇ ? ಇಷ್ಟು ಅನುಕೂಲಸ್ಥರಾಗಿ ಕಾಲೇಜಿಗೆ ಹಾಕಲಿಲ್ಲವೆಂದರೆ........ಆಯಿತು. ಸಂಗೀತ, ನೃತ್ಯ—ಇವೇನಾ ದರೂ ಬರುತ್ತದೆಯೋ ? "

" ಅಯ್ಯೊ ! ಬ್ರಾಹ್ಮಣರ ಮನೆಯ ಹುಡುಗಿಯರು ಇದನ್ನೆಲ್ಲ ಕಲಿತರೆ ತೀರಿತು. ಏನೂ ಕಲಿಸದೆ ಇದ್ದರೂ ಇನ್ನೂ ಮದುವೆ ಮಾಡಲಾಗಲಿಲ್ಲ. ಕಲಿಸಿದರೆ ಆಯಿತು. "

" ಇನ್ನೂ ಮದುವೆ ಮಾಡಲಿಲ್ಲ ಅಂದರೆ........ಬಹಳ ವರ್ಷಗಳ ಹಿಂದೇ ಆಗಬೇಕಾಗಿತ್ತೇನು ? "

" ಹೌದು. ಏನು ಮಾಡುವದು ಹೇಳಿ ? ನಮ್ಮ ಜಾತಿಯಲ್ಲಿ ಒಂದು ಯೋಗ್ಯ ವರ ಸಿಗುವದು ಎಷ್ಟು ಕಠಿಣ ಅನ್ನುವದು ಹೆಣ್ಣು ಹೆತ್ತವರಿಗೇ ಗೊತ್ತು "

" ಎಷ್ಟು ವರುಷ ಈಗ ನಡೆಯುತ್ತಿರುವದು ? "

" ಹದಿನೇಳು, ಹದಿನೆಂಟು. ನಿಮಗಿಂತ ಬಹಳ ಚಿಕ್ಕವಳಾಗುವದಿಲ್ಲ "

" ಬಣ್ಣ ರೂಪ ನಿಮ್ಮದೇಯೋ ?........ "

"ಥೇಟು ನನ್ನ ಹಾಗೆ! ನನ್ನದು ಗಂಡು ಮೊಕ; ಅವಳದು ಹೆಣ್ಣು. ಅಷ್ಟು. ನೀವೇ ನೋಡುವಿರಂತೆ. ಹೋಗೋಣ "

ಶೇಖರ ಸಣ್ಣದನಿಯಲ್ಲಿ ಉಳಿದವರಿಗೆ ಕೇಳುವಂತೆ ' ಶಿವ ಶಿವ ಶಿವ ' ಅಂದುಕೊಂಡ.

" ಹೆಸರು ಏನಿಟ್ಟಿದ್ದೀರಿ ? "

" ಮಹಾಕಾಳಿ ಅಂತ. ಅವಳ ಅಜ್ಜಿ ನಮ್ಮ ಕುಲದೇವತೆಯ ಹೆಸ ರನ್ನೇ ಇಟ್ಟಳು. "

ಶೇಖರ ಹ ! ಹ್ಹ ! ಹ್ಹ ! ! ಎಂದು ಹುಸಿನಕ್ಕ.

" ಯಾವುದೇನೇ ಇದ್ದರೂ ಹೆಸರನ್ನಾದರೂ ಒಳ್ಳೆಯದಿಡಬಾರದೇ ? "

" ಏನು ಮಾಡುವದು ? ಆ ಮುದುಕಿಯ ಹಟ ಮಂಕಾಳಿ ಎಂದೇ ಹೆಸರಿಡಬೇಕೆಂದು. ಏಳಿ, ಸ್ವಲ್ಪ ನಮ್ಮ ಮನೆಯನ್ನು ನೋಡಿ ಬರುವ "

" ಅರೆ ! ನಿಮ್ಮ ಮನೆ ನಾನು ನೋಡಲಿಲ್ಲವೇ ? "

" ಯಾವಾಗ ನೋಡಿದ್ದೀರಿ ? "

" ಇದೇ ಊರಿನಲ್ಲಿ ಸಾಲೆ ಕಲಿಯುತ್ತಿದ್ದಾಗ ವಾರ ಕೇಳಲು ನಿಮ್ಮ ಮನೆಗೂ ಬಂದಿದ್ದೆ. "

" ಬಂದಿರಲಿಕ್ಕೆ ಸಾಕು. ಬಹಳ ವರ್ಷಗಳಾದವು. ಮುದುಕರಿಗೆ ನೆನಪಿನ ಶಕ್ತಿ ಕಡಿಮೆ. ಮತ್ತೆ ನಮ್ಮ ಮನೆಯನ್ನು ಹೊಸದಾಗಿ ಕಟ್ಟಿಸಿದ್ದೇನೆ. ನೀವು ನೋಡುವ ಕಾಲಕ್ಕೆ ' ಶಿರಬಳೆ ' ಹಂಚು ಏನೂ ಇದ್ದಿರಲಿಕ್ಕಿಲ್ಲ. "

" ಛೆ. ಶಿರಬಳೆ, ಹಂಚು, ಗಚ್ಚು–ಗಾರೆನೆಲ ಎಲ್ಲ ಇತ್ತು "

" ಗಚ್ಚು–ಗಾರೆ ಇನ್ನೂ ಆಗಿಲ್ಲ. ಬೇರೆ ಯಾರದೋ ಮನೆ ಇರಬೇಕು ನೀವು ನೋಡಿದ್ದು "

" ಇದ್ದಿರಬಹುದು. ಈಗ ನನಗೆ ಊರಿಗೆ ಹೋಗಬೇಕು "

" ಇನ್ನು ಯಾವಾಗ ಬರುವದು ? "

" ಯಾವಾಗಲೋ "

" ಮುದ್ದಾಂ ಬನ್ನಿ ನಮ್ಮ ಮನೆಗೊಮ್ಮೆ. ಮತ್ತೆ ನಾನು ಹೇಳಿದ್ದು ನೆನಪಿರಲಿ "

" ಯಾವದು ? "

" ನಮ್ಮ ಮಾಂಕಾಳಿಯ............ "

" ಓಹೋ, ಅದೋ ? ಅಲ್ಲ, ನೋಡಿ ಇವರೇ........ನಿಮ್ಮ ಹೆಸರು.... ಹಂ........ಹೆಬ್ಬಾರರೆ. ನನ್ನನ್ನು ಕೇಳಿದರೆ ಇಂಥ ಅಶಿಕ್ಷಿತ, ಕಲಾವಿಹೀನ, ಅಸಡ್ಡ ಹೆಸರಿನ........ಹುಡುಗಿಯರಿಗೆ ವರನನ್ನು ಹುಡುಕುವದರಕ್ಕಿಂತ ಬಸವಿ ಬಿಟ್ಟುಬಿಟ್ಟರೆ ಒಳಿತೆಂದು ತೋರುತ್ತದೆ! " ಈ ಮಾತನ್ನು ಹೇಳುವಾಗ ಶೇಖರನ ಮೈಹೆದರಿಕೆ—ಸಂಕೋಚ—ಸೇಡು–ಸಿಟ್ಟುಗಳಿಂದ ನಡುಗುತ್ತಿತ್ತು.

ಹೆಬ್ಬಾರರು ಚಕಾರ ಮಾತಾಡಲಿಲ್ಲ " ಹಾಗಾದರೆ ಇಂಥ ಹುಡುಗಿಯರಿಗೆ ಮದುವೆಯಾಗುವ ಅಧಿಕಾರವೇ ಇಲ್ಲವೇ ? " ಎಂದು ಕೇಳಬೇಕೆಂದಿದ್ದರು. ಆದರೆ ನಾಲಿಗೆ ಏಳಲಿಲ್ಲ. ಸುಮ್ಮನೆ ಬಂದ ದಾರಿಯಲ್ಲಿ ಮರಳಿದರು.

ಅವರು ಹೋದ ಮೇಲೆ ಶಾಸ್ತ್ರಿಗಳು ಕೇಳಿದರು " ಏನಪ್ಪ, ಹೆಬ್ಬಾರರಿಗೆ ಇಂಥ ಮಾತು. ಮೇಲಿನ ನಂಬರು ಬಂದಿದ್ದೀಯೆಂದು ಬಹಳ ಸೊಕ್ಕಿದ ಹಾಗೆ ಕಾಣುತ್ತದೆ. ನಾನೇನೋ ಸುಮ್ಮನೆ ಕುಳಿತೆ. ಬಹಳ ಅಸಭ್ಯ " ಅಂದರು.

ಶೇಖರ ಹಿಂದಿನ ಕತೆ ಹೇಳಿದ.

" ಆದರೆ ನೀನು ಅದನ್ನು ನೆನಪಿಟ್ಟುಕೊಂಡು ಈಗ ಹೀಗೆ ಹಂಗಿಸುವದು ಸರಿಯಲ್ಲ. ಕ್ಷಮೆಯೇ ಮಾನವನ ದೊಡ್ಡ ಗುಣ. "

" ಅವರನ್ನು ನಾನು ತುಂಬಾ ಕ್ಷಮಿಸಿದ್ದೇನೆ ಶಾಸ್ತ್ರಿಗಳೇ. ಅಲ್ಲದಿದ್ದರೆ (ಜಾಮಾತಾ) ದಶಮ ಗ್ರಹ ಆಗಿ ಅವರ ಪಡಿಪಾಟು ಹಾರಿಸುತ್ತಿದ್ದೆ ! " ಅಂದ ಶೇಖರ. ಅವನ ಮನಸ್ಸು ಹಗುರಾಯಿತು.

# ಚಾ ದುಕಾನ್

ನನ್ನ ಜನ್ಮ ಗ್ರಾಮಕ್ಕೆ ಹೋಗದೆ ನಾಲ್ಕಾರು ವರುಷಗಳಾಗಿದ್ದವು. ಮೇ ತಿಂಗಳ ಬೆವರನ್ನು ತೋಟದ ಅಬ್ಬಿಯಲ್ಲಿ ತೊಳೆದು ತಂಪಾಗಿ ಒಂದು ಮಾಸ ಕಳೆದು ಬರುವ ಎಂದು ಹಳ್ಳಿಗೆ ಹೋಗಿದ್ದೆ.

ಮನೆಗೆ ತಲುಪಿದ ಮರುದಿನವೇ ತಂಗಿಯ ಮನೆಗೆ ಹೋಗುವದು ನನ್ನ ಪದ್ಧತಿ. ನಮ್ಮ ಕೇರಿಯ ಎದುರಿನ ಗುಡ್ಡೆಯನ್ನು ಹತ್ತಿಳಿದರೆ ನನ್ನ ತಂಗಿಯನ್ನು ಕೊಟ್ಟ ಊರು ಬರುತ್ತದೆ. ಗುಡ್ಡೆಯ ಓರೆಗುಂಟ 'ರಸ್ತೆ'ಯಲ್ಲಿ— ಒಕ್ಕಲು ಮಕ್ಕಳ ಕೇರಿಯನ್ನು ಹಾಯ್ದು ಹೋಗಲಿಕ್ಕೂ ಬರುತ್ತದೆ. ಸ್ವಲ್ಪ ಸುತ್ತು ಅಷ್ಟೆ.

ಕಳೆದ ಸಲ ಹೋದಾಗ ರಸ್ತೆಯನ್ನೇ ಹಿಡಿದು ಹೊರಟೆ. ಟೆನಸ್ಸಿ ಕಾಯಿದೆ, ರೈತಸಂಘ ಸ್ಥಾಪನೆ, ಮುಂತಾದ ಸುಧಾರಣೆಗಳಿಂದ ಭೆಟ್ಟಿಯಾದ ಒಕ್ಕಲು ಮಕ್ಕಳಿಗೆ ನನ್ನ ಗುರುತು ಸರಿಯಾಗಿ ಹತ್ತಲಿಲ್ಲವೆಂದು ತೋರುತ್ತದೆ. ಒಬ್ಬಿಬ್ಬರು ಮಾತ್ರ "ಯಾವಾಗ್ಬಂದ್ರೋ ಒಡ್ಯ?" ಎಂದು ದೂರಿಂದಲೇ ಕೇಳಿ ಸತ್ಕರಿಸಿದರು. ಒಡೆಯ ಒಕ್ಕಲುಗಳ ತಿಕ್ಕಾಟದ ವಿಷಯವನ್ನು ಮೊದಲೇ ಕೇಳಿದ್ದೆನಾದ್ದರಿಂದ ನನಗೆ ಈ ಬಗೆಯ ವರ್ತನೆಯಿಂದ ಖೇದವಾದರೂ ಆಶ್ಚರ್ಯವಾಗಲಿಲ್ಲ.

ಒಕ್ಕಲ ಕೇರಿಯನ್ನು ದಾಟಿ ಎರಡು ಹೆಜ್ಜೆಯನ್ನೂ ಹಾಕಿಲ್ಲ, ರಸ್ತೆಯ ಬಲಗಡೆಗೆ "ಚಾ ದುಕಾನ್" ಎಂಬ ಬೋರ್ಡು! ಒಂದು ತಟ್ಟಿಯ 'ಗುಬ್ಬಿ' ಯಿಂದ ಹೊಗೆ ಬರುತ್ತಿದೆ! ಅದರ ಬಾಗಿಲು ಮಾತ್ರ ಕಾಣಿಸುತ್ತದೆ; ಒಳಗಿನದೇನೂ ಗೋಚರಿಸುವಂತಿಲ್ಲ. ಅಬ್ಬ, ನಮ್ಮೂರಿಗೂ ಚಾ ದುಕಾನ್ ಬಂತೇ! ಎಂದು ಉದ್ಗರಿಸಿ ಮುಂದೆ ಕಾಲು ಹಾಕುವಷರೊಳಗೇ, "ಓಹೋ........ ಯಾವಾಗ ಬಂದ್ಯೋ ?" ಎಂದು ನನ್ನ ಹೆಸರು ಹೇಳಿ ಕರೆದದ್ದು ಕೇಳಿಬಂತು! ನೋಡುತ್ತೇನೆ. ನಮ್ಮ ಕೇರಿಯ, ಪ್ರಾಥಮಿಕ ಸಾಲೆಯಲ್ಲಿ ನನ್ನ ಸಹ ಪಾಠಿಯಾಗಿದ್ದ, ಜೋಯ್ಸ ನನ್ನನ್ನು ಕರೆಯುತ್ತಿದ್ದಾನೆ. ಅವನ ಉಡುಪು, ಸ್ವಚ್ಛತೆ

ಗಳ ಮೇಲಿಂದ ಸಪರೀ ಚಾ ದುಕಾನಿನ ಯಜಮಾನ+ಸೇವಕ=ಈ ಜೋಯ್ಸ
ನೆಂದು ತಿಳಿಯಲು ನನಗೆ ಹೊತ್ತು ಹಿಡಿಯಲಿಲ್ಲ.

ಲಂಗೋಟಿ ದೋಸ್ತನ ಸನ್ಮಾನಕ್ಕೆ ಬಾಗಲೇ ಬೇಕಾಯಿತು. ಚಾ ಮಕಾನ್ ಪ್ರವೇಶಿಸಿದೆ "ಕೊಟ್ಟಂ ಕೆಟ್ಟಂ" ಎಂಬ ಸಂಗೀತ ಕಚೇರಿ ನಡಿಸಿತ್ತು ಒಳಿ. ಮೂರು ನಾಲ್ಕು ಒಕ್ಕಲು ಮಕ್ಕಳು ತಂತಮ್ಮ ಕಂಬಳಿಯ ಮೇಲೆ ಕುಳಿತು ಗರಟೆಯಲ್ಲಿ ಚಾ ಕುಡಿಯುತ್ತಿದ್ದರು.

"ಹೀಂಗ್ಯಾ ಥಾ ಮಾಡ್ಕೊಟ್ರೆ, ಕಪ್ಪೀಗೆ ಎಡ್ಡಾಣೆ ಕೊಡ್ತಾರ್ವಿದು"

"ನೀ ಯೇನೇ ಹೇಳು, ಕಪ್ಪುಬಸಿ ಇಲ್ದಿದ್ರೆ ಚಾಕ್ಕೆ ರುಚ್ಯೇ ಇಲ್ಲ."

ಅವರು ತಮ್ಮೊಳಗೆ ಏನೋ ಸಂಭಾಷಣೆ ನಡಿಸಿದ್ದರು.

ನನಗಾಗಿ "ಇಸ್ಪೇಶಲ್" ಚಾ ತಯಾರಿಸಲು ಜೋಯ್ಸ ಸನ್ನದ್ಧನಾದ. ಒಕ್ಕಲು ಮಕ್ಕಳು ಗರಟೆ ತೊಳೆದು ಕವುಚಿಟ್ಟು, ರೊಕ್ಕಕೊಟ್ಟು ಹೊರಟರು. ಚಾ ಮಕಾನ್‌ದಲ್ಲಿ ನಾವಿಬ್ಬರೇ ಆದೆವು.

"ಏನಿದು ಮಾರಾಯಾ, ಜೋಯ್ಸ–ಗಿರಿ, ಶೋಟ, ಎಲ್ಲ ಬಿಟ್ಟು ಈ ಅವತಾರ ಮಾಡಿದೆ ?" ಎಂದು ಬಾಂಕಿನ ಮೇಲೆ ಮಂಡಿಸುತ್ತ ಕೇಳಿದೆ.

"ಉದರ ನಿಮಿತ್ತೇ." ಜೋಯ್ಸ ಮಾಡಿನೊಳಗೆ ಸಿಕ್ಕಿಸಿಟ್ಟ ಸಣ್ಣ ಡಬ್ಬಿಯೊಳಗಿಂದ ಸಕ್ಕರೆ ತೆಗೆಯುತ್ತ ಹೇಳಿದ.

"ಈ ದಂಧೆಯೇ ಏಕೆ ಬೇಕಾಯಿತು ಅಂದೆ."

"ಅದನ್ನೆಲ್ಲ ಹೇಳಿದರೆ ನಿನಗೆ ತಿಳಿಯಲಿಕ್ಕಿಲ್ಲ. ತಿಳಿದರೂ ಸರಿಯೆನಿಸಲಿಕ್ಕಿಲ್ಲ."

ಇಬ್ಬರೂ 'ಇಸ್ಪೆಶಲ್' ಚಾ ಮೋರ ಹತ್ತಿದೆವು.

"ಎಲ್ಲಾ ಬಿಟ್ಟು ಬಂಗೀ ನೆಟ್ಟ ಅಂದ ಹಾಗೆ ಈ ದಂಧೆ...."

"ಜೋಯ್ಸ ಮನೆತನಕ್ಕೆ ಇದು ಒಪ್ಪುವದಿಲ್ಲವೆಂದು ನಿನ್ನ ಅಭಿಪ್ರಾಯವೋ ?"

"ಉಹುಂ." ನನ್ನ ದನಿಯಲ್ಲಿ ಸಂದೇಹ ಹುದುಗಿತ್ತು.

"ನೋಡು ವಿಜಯ, ಸಂಸ್ಕೃತ ಕಲಿತಿದ್ದಕ್ಕೆ ಮಂತ್ರ ಒದರಿ ಹೇಗಾದರೂ ಇರುವ ಅಂದರೆ ನಮ್ಮ ಜನರಲ್ಲಿ ಭಕ್ತಿ ಕಡಿಮೆಯಾಗುತ್ತಿದೆ. ಇಷ್ಟ ಒಂದು ತುಂಡು ಜಮೀನಿನ ಉತ್ಪನ್ನವೂ ಈ ಟೆನಸ್ಸಿ ಕಾಯ್ದೆಯಿಂದ ಕೈ

ತಪ್ಪಿದ ಹಾಗೇ. ಒಕ್ಕಲು ಮಕ್ಕಳ ಸೊಕ್ಕು ಹೇಳಿ ತೀರದು. ರೈತ ಸಂಘ
ವೊಂದು ಬೇರೆ ಆಗಿದೆ. ನಮ್ಮಂಥವರು ಬದುಕುವದೇ ಅಸಾಧ್ಯ. ಕದ್ದು
ಕೊಂಡೋ, ಬೇಡಿಕೊಂಡೋ ತಿನ್ನಲು ಮನಸ್ಸಾಗುವದಿಲ್ಲ...."

ಇಸ್ಪೇಶಲ್ ಚಾ ಕುಡಿದ ಹುರುಪಿನಲ್ಲಿ ಜೋಯ್ಸ್ನ ಮುಂದುವರಿಸಿದ:

"ಈ ಒಕ್ಕಲು ಮಕ್ಕಳ ಕೈಲಿ ರೊಕ್ಕ ಆಡಹತ್ತಿ ಅವರ ಸೊಕ್ಕು ನೆತ್ತಿ
ಗೇರಿದೆ. ಒಡೆಯ ಅಂದರೆ ಕಾಲ ಕಸ ಅವರಿಗೆ. ನಿನಗೆ ಹೇಳದೆ ಏನು?
ನಮ್ಮನ್ನು ಸೋಲಿಸುವ ಈ ಒಕ್ಕಲಿಗನಿಗೆ ಹದಹಾಕಲಿಕ್ಕೇ ನಾನು ಈ
ದುಕಾನ್ ತೆರೆದದ್ದು. ನೀನೇ ನೋಡಿದೆಯಲ್ಲ, ಹೇಗೆ ಚಾ ಮಾರಿ, ರೊಕ್ಕ
ಬಿಸಾಟಿ ಹೋಗುತ್ತಾರೆ. ಮನೆಗೆ ಕೆಲಸಕ್ಕೆ ಕರೆದರೆ ಬಾರದವರು, ಇಲ್ಲಿಗೆ
ಕುಂಯಾ್ ಅನ್ನುತ್ತ ಬರುತ್ತಾರೆ....."

ಇಸ್ಪೆಶಲ್ ಚಾ ಕುಡಿದದ್ದರಿಂದ ನನ್ನ ತಲೆಯಲ್ಲೂ ಚಕ್ರಗಳು ತಿರುಗ
ಹತ್ತಿದವು. ಬಹಳ ಹೊತ್ತು ಅಲ್ಲಿ ಕುಳಿತುಕೊಳ್ಳಲಾರದೆ ಜೋಯ್ಸನನ್ನು
ಅಭಿನಂದಿಸಿ, ಅವನ ದಂಧೆಯಲ್ಲಿ ಯಶಸ್ಸು ಕೋರಿ, ಹೊರಟೆ.

ಜೋಯ್ಸನು ರೈತರನ್ನು ಸುಲಿಯಲು ಚಾದುಕಾನ್ ತೆರೆದದ್ದು ತಪ್ಪೇ?

ಸೊಕ್ಕಿದ ರೈತರಿಗೆ........ಯಾರದು ತಪ್ಪು?........ಪಾನ ಪ್ರತಿಬಂಧ....
ಸರಕಾರ........ಕುರಿಹಿಂಡು........ರಶಿಯಾ........ ? ........ ?

ಇಸ್ಪೆಶಲ್ ಚಾ ಕುಡಿದ ನನಗೆ ಆ ರಾತ್ರಿ ನಿದ್ದೆಯೇ ಬೀಳಲಿಲ್ಲ.

# ಸರಸ್ವತಿಯ ತಳಮಳ

ಅಡಿಕೆ ಛತ್ರಗಳ ವ್ಯಾಪಾರದಿಂದ ಅಶ್ವತ್ಥ ಹೆಬ್ಬಾರರು ನೂರಾರು ಸಾವಿರ ರೂಪಾಯಿ ಗಳಿಸಿದರೆಂದು ದಟ್ಟವಾಗಿ ಸುದ್ದಿ ಹಬ್ಬಿತು. ಇದಕ್ಕೆ ಸಾಕ್ಷಿ ಕೊಡುವಂತೆ ಹೆಬ್ಬಾರರು ಗ್ರಾಮದೇವಸ್ಥಾನದಲ್ಲಿ ಒಂದು ಯಜ್ಞವನ್ನು ಮಾಡಿಸುವೆನೆಂದು ಸಾರಿ, ತಯಾರಿ ಮಾಡಹತ್ತಿದರು.

ತಟ್ಟಿಯ ಬಿಡಾರದಲ್ಲಿ ಸಾಲೆ ನಡೆಸುತ್ತಿದ್ದ ನಮಗೆ ಹೆಬ್ಬಾರರಿಂದ ತುಂಬಾ ಸಹಾಯಪಡೆದು, ಊರಲ್ಲಿ ನೂರಿನ್ನೂರು ರೂಪಾಯಿಗಳ ವರ್ಗಣಿಯನ್ನು ಕೂಡಿಸಿ ಒಂದು ಸಣ್ಣ ಸಾಲೆಯ ಮನೆಯನ್ನು ಕಟ್ಟಿಸಬಹುದೆಂಬ ಆಸೆ ಮೂಡಿತು.

ಹೆಡ್ಮಾಸ್ತರರೂ ನಾನೂ ಹೆಬ್ಬಾರರ ಮನೆಗೆ ಹೋದೆವು. ಯಜ್ಞದ ತಯಾರಿಯ ಗಡಬಡೆಯಲ್ಲಿ ಅವರು ನಮಗೆ ಭೆಟ್ಟಿ ಕೊಡಬೇಕಾದರೆ ನಾವು ಅವರ ಮನೆಯ ಪೊಳ್ಳಿಯನ್ನು ಸಂಪ್ರು ಮಾಡಬೇಕಾಯಿತು! ಅಂತೂ ಹೆಬ್ಬಾರರು ಸ್ವಲ್ಪ ಪುರಸೊತ್ತು ಮಾಡಿಕೊಂಡು ದರ್ಶನವಿತ್ತರು. ನಾವು ನಮ್ಮ ಬಿನ್ನಹವನ್ನು ಅವರ ಮುಂದಿಟ್ಟೆವು. “ ಛೆ! ಛೆ! ಈ ಯಜ್ಞದ ಕಾರ್ಯವೊಂದು ಮೊದಲು ಆಗಲಿ ” ಅಂದರು ಹೆಬ್ಬಾರರು. ಅದು ಆದ ಮೇಲೆ “ ಯಜ್ಞಕ್ಕಾಗಿ ಕೈಯಲ್ಲಿದ್ದುದೆಲ್ಲ ಖರ್ಚಾಯಿತು ” ಎಂದು ಅವರು ಹೇಳಬಹುದೆಂಬ ಭೀತಿಯಿದ್ದುದರಿಂದ ನಾವು ಸರಸ್ವತಿಯ ಗುಣಗಾನಮಾಡಿ ಸಾಲೆಯ ದುರ್ದೆಶೆಯನ್ನು ವಿವರಿಸಿದೆವು; ಸಾಲೆ ಕಟ್ಟಿಸುವದೂ ಒಂದು ದೇವಕಾರ್ಯವೆಂದೇ ತಿಳಿಸಿಹೇಳಿದೆವು.

“ ನಿಜವಾಗಿ ಹೇಳಲೊ ? ನಮ್ಮ ಮನೆಯ ಮಕ್ಕಳು ಕಲಿತು ಉದ್ಧಾರ ಮಾಡಬೇಕಾಗಿಲ್ಲ ” ಹೆಬ್ಬಾರರು ತಮ್ಮ ಅಂತರ್ಗತ ಒಡಕು ದನಿಯೆತ್ತಿದರು.

“ ಊರಿನ ಮಕ್ಕಳಿಗಾದರೂ....” ನಮ್ಮ ಹೆಡ್‌ಮಾಸ್ತರರು ಕುಯ್ಯೋ ಗುಟ್ಟಿದರು.

" ಊರಿನವರು ಹಾಳಾದರು ! ಅವರ ಮಕ್ಕಳ ಸಲುವಾಗಿ ನಾನು ಖರ್ಚು ಮಾಡಬೇಕೆಂದೆಲ್ಲಿದೆ ? ಎಲ್ಲರೂ ವಂತಿಗೆ ಹಾಕಲಿ. ನನ್ನ ಪಾಲಿಗೆ ಬಂದುದನ್ನು—ಎಲ್ಲರಷ್ಟೇ—ನಾನು ಕೊಟ್ಟೇಕೊಡುತ್ತೇನೆ. "

" ನಿಮ್ಮಂಥವರು ಎಲ್ಲರಷ್ಟೇ ಅಂದರೆ ಹೇಗೆ ? ಪೂರ್ವಕಾಲದಿಂದಲೂ ದೊಡ್ಡವರ ಆಶ್ರಯದಿಂದಲೇ ಸರಸ್ವತಿಯ ಆರಾಧನೆ ನಡೆಯುತ್ತ ಬಂದಿದೆ." ನಾನು ತುಸುಮುಂದೆ ಸರಿದು ನುಡಿದೆ.

" ಅವೆಲ್ಲ ಹಿಂದಿನಕಾಲದ ಮಾತು. ಆಗ ಯಜ್ಞಯಾಗಾದಿಗಳು ಸರಿಯಾಗಿ ನಡೆಯುತ್ತಿದ್ದವು. ಈಗ ದೈವ ದೇವರು ಕೈಬಿಡಹತ್ತಿದ್ದಾನೆ. ಒಂದು ಪೂಜೆ, ಪುನಸ್ಕಾರ ಏನೂ ಕೇಳಬಾರದು. ಅದಕ್ಕಾಗಿಯೇ ಈ ಯಜ್ಞವೊಂದು ಆಗಲಿ ಎಂದು ನನ್ನ ಪ್ರಯತ್ನ. ಎಷ್ಟೇ ಖರ್ಚು ಬಂದರೂ ಬರಲಿ. ಯೋಗ್ಯವಾಗಿ ಮಾಡಿಸುತ್ತೇನೆ. ಇದರಿಂದ ಊರಿನ ಕಲ್ಯಾಣವಾದರೂ ಆಗಲಿ....ಇಂಥ ಯಜ್ಞಮಾಡಿಸುವುದು ಹುಡುಗಾಟಿಕೆಯಲ್ಲ. ನೋಡಿ, ಕಳೆದ ಇನ್ನೂರು ವರ್ಷಗಳಿಂದ ಇಂಥ ಒಂದೂ ಯಜ್ಞ ಈ ಸೀಮೆಯಲ್ಲಿ ಆಗಿಲ್ಲ. ಏನೋ ದೇವರು ಮಾಡು ಎಂದು ಪ್ರೇರಣೆಕೊಟ್ಟಿದ್ದಾನೆ....ನಿಮಗೆ ಹೇಳುತ್ತೇನೆ; ಸಾಮಾನ್ಯರಿಂದ ಆಗುವ ಕೆಲಸ ಅಲ್ಲ ಇದು...."

" ಛೆ ! ಛೆ ! ಹಿಂದಿನಕಾಲದಲ್ಲಿ ರಾಜರು ಮಹಾರಾಜರು ಮಾತ್ರ ಮಾಡಿಸುತ್ತಿದ್ದರು. ಈಗಿನ ಕಾಲದಲ್ಲಿ ಸಾಮಾನ್ಯರನ್ನು ಬಿಟ್ಟು ದೊಡ್ಡ ದೊಡ್ಡ ಶ್ರೀಮಂತರಿಗೂ ಸಾಧ್ಯವಿಲ್ಲ. "

" ಸಾಧ್ಯವಿದ್ದರೂ ಈ ಬಗೆಯ ಮನಸ್ಸಾಗುವದಿಲ್ಲ. ನೋಡಿ. ಧರ್ಮ ಕೆಡುತ್ತಿತಿುವಈಕಾಲದಲ್ಲಿ ದೇವ ಕಾರ್ಯಗಳನ್ನು ಮಾಡುವ ಮನಸ್ಸಾಗುವದಕ್ಕೂ ಒಂದು ಪುಣ್ಯಬೇಕು ನೋಡಿ."

" ಹೌದು ಅಂದೆ. ನಿಮಗೆ ಈ ಮನಸ್ಸು ಬಂತು ಅಂತ ಶಂಕರ ಹೆಗಡೆಯವರಿಗಾಗಲಿ...." ಹೆಡ್‌ಮಾಸ್ತರರ ಮಾತು ಮುಗಿಯುವ ಮುಂಚೇ ಹೆಬ್ಬಾರರು ಬಾಯಿಹಾಕಿ " ಥೂ ! ಆ ಹೆಗಡೆ ಮಣ್ಣು ತಿಂದ. ಅವನಿಗೆಲ್ಲಿ ಇದೆ ಯಜ್ಞಮಾಡುವ ಯೋಗ್ಯತೆ ಅಂದೆ" ಎಂದು ತಮ್ಮದೊಡ್ಡಸ್ತನವನ್ನು ಕಾಯ್ದುಕೊಂಡರು. ಜನರು ಶಂಕರ ಹೆಗಡೆಯನ್ನು ತನ್ನಷ್ಟು ಶ್ರೀಮಂತನೆಂದು ಗಣಿಸುತ್ತಾರಲ್ಲ ಎಂಬ ಅವರ ಮತ್ಸರ ಹೊರಹೊಮ್ಮಿದ್ದನ್ನು ಕಂಡು ನಾನು

" ಆದರೂ ಒಳ್ಳೆಯವರು ಹೆಗಡೆಯವರು. ಮೊನ್ನೆ...." ಅನ್ನುವ ಮುಂಚೇ " ಈಗಿನಕಾಲದಲ್ಲಿ ಎಲ್ಲರೂ ಒಳ್ಳೆಯವರೇ " ಎಂದು ಹೇಳಿ ಹೆಬ್ಬಾರರು ಎದ್ದು ಬಿಟ್ಟರು.

ಎಷ್ಟು ಪ್ರಯತ್ನಿಸಿದರೂ ಹೆಬ್ಬಾರರಿಂದ ಸಾಲೆಯ ಕಟ್ಟಡಕ್ಕೆ ಸಹಾಯ ಪಡೆಯುವದು ಸಾಧ್ಯವಾಗಲಿಲ್ಲ. " ಬಂದವರನ್ನು ಬರಿಗೈಯಲ್ಲಿ ಕಳುಹಿಸ ಬಾರದು ಅಂತ....ತಕ್ಕೊಳ್ಳಿ...." ಎಂದು ಒಳಗಿನಿಂದ ಒಂದು ರೂಪಾಯಿ ಯನ್ನು ತಂದುಕೊಟ್ಟರು. ನಾವು ಕೆಟ್ಟ ಮೋರೆಯಿಂದ " ನಿಮ್ಮಂಥವರು...." ಅಂದೆವು. " ಈಗ ಹೇಳಿದುದೆಲ್ಲ—ಅವರವರ ಅಡಚಣಿ ಅವರವರಿಗೆ " ಎಂದ ವರೇ ಕೆಲಸದ ಗಡಿಬಿಡಿ ತೋರಿಸುತ್ತ ಅಂಗಳಕ್ಕೆ ಇಳಿದರು. ನಾವೂ ಏಳಲೇ ಬೇಕಾಯಿತು.

× × × ×

ಕಾಶಿ ರಾಮೇಶ್ವರಗಳಿಂದ ಸಾಧುಸಂತರು ಬಂದರು. ಸಪ್ತಮಠಗಳ ಗುರುಗಳೂ ಆಗಮಿಸಿದರು. ದೇವಸ್ಥಾನದ ಎದುರಿಗೆ ತೇರುಬೀದಿತುಂಬ ಅತಿಥಿಗಳೇ ಅತಿಥಿಗಳು. ಹೆಬ್ಬಾರರ ವ್ಯವಸ್ಥೆಯೂ ಕಡಿಮೆಯದಾಗಿತ್ತಿಲ್ಲ. ಸ್ನಾನ ಸಾಲೆ, ಸಂಧ್ಯಾವಂದನ ಸಾಲೆ, ಚಹಾಕಾಫಿಸಾಲೆ, ಭೋಜನಸಾಲೆ— ಹೀಗೆ ಬೇರೆ ಬೇರೆ ಸಾಲೆಗಳನ್ನು ಕಟ್ಟಿಸಿದರು. ಸಮೀಪವೇ ಇದ್ದ ನಮ ತಟ್ಟೆಯ ಸಾಲೆಯು ಯಜ್ಞಕಾರ್ಯ ಮುಗಿಯುವವರೆಗೆ ಬಂದು ಆಗಿತ್ತು; ಅದನ್ನು ಮೇಲೋಗರಕ್ಕೆ ಕಾಯಿಪಲ್ಲೆ ಕೊಚ್ಚುವ ಸಾಲೆಯನ್ನಾಗಿ ಮಾಡಿ ದ್ದರು! ಊರಿನ ಹೆಬ್ಬಾರರಿಗೆ—ಒಂದು ರೂಪಾಯಿ ವರ್ಗಣಿಕೊಟ್ಟ ಶ್ರೀಮಂತ ದಾನ ಶೂರರಿಗೆ—ನಮ್ಮ ತಟ್ಟೆಯ ಸಾಲೆಯನ್ನು ಬಿಟ್ಟುಕೊಡುವ ದಿಲ್ಲವೆಂದು ಹೇಳುವ ಧೈರ್ಯ ಯಾರಿಗೆ ?

ಹದಿನೈದು ದಿನಗಳವರೆಗೆ ಯಜ್ಞಕಾರ್ಯ ಸಾಗಿತು. ದಿನಕ್ಕೆ ೧೦೧ ಸತ್ಯ ನಾರಾಯಣ ಪೂಜೆ, ೧೦೪ ಇದು, ೧೧೦ ಅದು ಅಂತ ಬಹಳ ವೈಭವದಿಂದ ನಡೆಯಿತು. ಈ ಕಾರ್ಯಗಳಿಗೆಲ್ಲ ಕಳಸ ಕಟ್ಟುವಂತೆ ಹೆಬ್ಬಾರರು ದೇವರಿಗೆ ಏಳೂವರೆ ಸಾವಿರ ರೂಪಾಯಿಗಳ ಬೆಲೆಯ ಚಿನ್ನದ ಕಿರೀಟವನ್ನು ಮಾಡಿಸಿ ಹಾಕಿ ಧನ್ಯರಾದರು. ಊರಿಗೆ ಊರೇ ಹೆಬ್ಬಾರರನ್ನು ಕೊಂಡಾಡಿತು. ಆಗಮಿ ಸಿದ ಸಂತರು, ಗುರುಗಳು, ಸನ್ಯಾಸಿಗಳು, ದ್ವಿಜವೃಂದಗಳು ಹೆಬ್ಬಾರರಿಗೆ

ಹೊರಿಸಿಕೊಟ್ಟು ಹೋದ ಹರಕೆಯ ಭಾರವನ್ನು ಯಾರಿಗೂ ತೂಗಬರು ವಂತಿಲ್ಲ.

ಬ್ರಾಹ್ಮಣ ಜನ್ಮಕ್ಕೆ ಬಂದು ಹಣ ಗಳಿಸಿ ಕೃತಾರ್ಥನೆಂದು ಹೆಬ್ಬಾರರು ಆಧ್ಯಾತ್ಮಿಕ ಆನಂದದಿಂದ ಓಲಾಡುತ್ತಿರುವಾಗಲೇ ಊರಲ್ಲಿ ಮೈಲಿ ಹಬ್ಬುತ್ತಿತು. ಕಾಶಿ ರಾಮೇಶ್ವರಗಳಿಂದ ಯಾವ ಯಾವ ರೋಗಗಳ ಬೀಜಗಳು ನಮ್ಮೂರಿನಲ್ಲಿ ಬಿದ್ದವೋ ೭॥ ಸಾವಿರ ರೂ.ಗಳ ಕಿರೀಟ ಧರಿಸಿದ ಆ ದೇವನೇ ಬಲ್ಲ! ಇದೇ ಸಮಯದಲ್ಲಿ ಊರಲ್ಲೆಲ್ಲ ಹಾಹಾಕಾರವೆದ್ದಿತು. ೭॥ ಸಾವಿರ ರೂ. ಗಳ ಕಿರೀಟವನ್ನು ಯಾರೋ ಅಪಹರಿಸಿಬಿಟ್ಟರು! ಇದಕ್ಕೂ ಹೆಚ್ಚಿನ ಪಂಪರಿ ಸ್ವತಃ ಯಜ್ಞ ಮಾಡಿಸಿದ ಹೆಬ್ಬಾರರಿಗೇ 'ದೇವಿ' ಪ್ರಸನ್ನಳಾಗಿದ್ದಾಳೆಂಬ ಸುದ್ದಿ ಖಾತ್ರಿಯಾಯಿತು.

" ಕಿರೀಟದ ಕಳವಾದದ್ದು ದೇವರ ಮನಸ್ಸಿಗೆ ಬರಲಿಲ್ಲ. ಊರಿನವರೆಲ್ಲ ಹೋಗಿ ಬಾಗಿಲು ಕಟ್ಟಿ ಬೇಡಿಕೊಳ್ಳಬೇಕು. ತಪ್ಪಾಯಿತು, ಇನ್ನೊಂದು ಇದಕ್ಕೂ ಹೆಚ್ಚಿನ ಕಿರೀಟ ಮಾಡಿಸಿಹಾಕುತ್ತೇವೆ, ಕೋಪಿಸಿಕೊಳ್ಳಬಾರದು ಎಂದು........" ಹಾಸಿಗೆಯ ಮೇಲಿಂದ ಹೆಬ್ಬಾರರು ಊರವರಿಗೆ ಸಂದೇಶ ಕಳುಹಿಸಿದರು.

ಶ್ರೀದೇವರ ಕೋಪ ಹೆಚ್ಚುವದಕ್ಕಿಂತ, ೭॥ ಸಾವಿರಕ್ಕಿಂತ ಹೆಚ್ಚಿನ ಬೆಲೆಯ ಕಿರೀಟವು ದೇವರ ತಲೆಗೆ ಬೀಳುವದಕ್ಕಿಂತ, ಮುಂಚೇ ಮೈಲೀ ಖಾತೆಯವರು ಬಂದು ಯೋಗ್ಯ ಚಿಕಿತ್ಸೆ ಮಾಡಿದುದರಿಂದ ಊರು ಉಳಿಯಿತು.

" ಹೆಬ್ಬಾರರ ಯಜ್ಞ ದೇವರ ಮನಸ್ಸಿಗೆ ಬಂದಿಲ್ಲವೆಂತ ತೋರುತ್ತದೆ " ಯಾರೋ ಕಿಡಿಗೇಡಿಗಳು ಹೇಳಿದರು.

ಚಿನ್ನದ ಕಿರೀಟದ ಕಳವಿನಿಂದ ದೇವರಿಗೆ ಸಿಟ್ಟು ಬಂದಿತೆಂದು ಬ್ರಾಹ್ಮಣ ವೃಂದ ಸಾರಿತು. " ಬೇರೆಯವರಿಗೆ ಟೊಪ್ಪಿಗೆಹಾಕಿ ಗಳಿಸಿದ ಹಣ!" ಅಂದರು ಕೆಲವರು.

" ಸರಸ್ವತಿಗೆ ತಳಮಳವಾಗಿರಬೇಕು " ನಾವು ನಮ್ಮೊಳಗೇ ಅಂದು ಕೊಂಡೆವು.

# ಮಕ್ಕಳಿಗಾಗಿ!

"ಎಷ್ಟು ದಿನ ಹೀಗೇ ತೊಂದರೆ ಪಟ್ಟುಕೊಳ್ಳುತ್ತಿರುವದು ಕೃಷ್ಣ ಮೂರ್ತಿ ? ಮಕ್ಕಳನ್ನು ಆರಯ್ಯುವದು, ಅಡಿಗೆ ಮಾಡುವದು—ಇವುಗಳಿಗೆಲ್ಲ ಆಳು ಇಟ್ಟು ಪೂರೈಸೀತೇ ? ಸುಮ್ಮನೆ ಇನ್ನೊಂದು ಮದುವೆಯಾಗಿ ಬಿಡಬಾರದೇ ? "

" ಪ್ರೀತಿ ಇಷ್ಟು ಅಗ್ಗ ಅಲ್ಲ ನೋಡು "

" ಪ್ರೀತಿಯ ವಿಷಯವೇನೇ ಇರಲಿ; ಪ್ರತಿನಿತ್ಯದ ಈ ತೊಂದರೆಗಳಿಗಾಗಿಯಾದರೂ ನೀನು ಮದುವೆಯಾಗುವದು ಹಿತ "

" ಮನಸ್ಸು ಒಪ್ಪುವದಿಲ್ಲ "

" ಮನೆಯಲ್ಲೊಮ್ಮೆ ವ್ಯವಸ್ಥೆ"ಶಿಸ್ತು-ಸಿಂಗಾರ ಆಯಿತೆಂದರೆ ಮನಸ್ಸೂ ಸರಿಯಾಗುತ್ತದೆ "

" ಅಂದರೆ ಮಡಿದವಳು ಮರೆವಿನಲ್ಲಿ ಬಿದ್ದು ಹೋಗುತ್ತಾಳೆಂದೇ ? "

" ಹೌದು. ಒಂದುವೇಳೆ ಮರೆತು ಹೋಗದಿದ್ದರೆ ಪ್ರಯತ್ನಪಟ್ಟಾದರೂ ಮರೆಯಬೇಕು. "

" ಹೇಳುವದೇನೋ ಸುಲಭ. "

" ಈಗ ಎರಡನೆಯ ಮದುವೆಯಾದವರು ಜಗತ್ತಿನಲ್ಲಿ ಇಲ್ಲವೆ ಹಾಗಾದರೆ ? "

" ಬೇಕಾದಷ್ಟು ಇದ್ದಾರೆ.ಆದರೆ ನನ್ನ ಪ್ರೇಮಪ್ರಪಂಚ ಅವರಂತೆಯೇ ಅಲ್ಲ. "

ಅರ್ಧತಾಸಿನವರೆಗೆ ಅವನು ತನ್ನ ಪ್ರೇಮದ ಕತೆಯನ್ನು ಹೇಳಿ ಅದು ದಿವ್ಯವೆಂದೂ ಅದರ ಸ್ಥಾನದಲ್ಲಿ ಇನ್ನೊಂದನ್ನು ತಂದಿರಿಸುವದು ಅಸಾಧ್ಯವೆಂದೂ ಹೇಳಿದನು.

" ಸೂರ್ಯ ಚಂದ್ರರ ಸಾಕ್ಷಿಯಲ್ಲಿ ನನ್ನನ್ನು ಅವಳಿಗರ್ಪಿಸಿದೆ. ಅವಳು ಮಡಿದಂದಿನಿಂದ ' ನಾನು ' ಎನ್ನುವದು ಈ ದೇಹ ಮಾತ್ರ "

" ಈ ದೇಹ, ಈ ಮಕ್ಕಳ ದೇಹಗಳ ಪಾಲನೆ ಪೋಷಣೆಗಳಿಗಾಗಿ ಯಾವದರೂ ಇನ್ನೊಂದು ದೇಹವನ್ನು ನೀನು ತರಬೇಕು ಮೂರ್ತಿ "

ಅವನು ನಸುನಕ್ಕು ಹೇಳಿದ—" ದೇಹಕ್ಕಿಂತ ಮನಸ್ಸು ಕೋಮಲ. ಮನಸ್ಸಿನಿಂದಲೇ ದೇಹದ ಉಳಿವು, ಬೆಳವಣಿಗೆ ಎಲ್ಲ "

" ಅದಕ್ಕೇ ನಾನು ಹೇಳುವದು. ದೇಹವನ್ನು ಉಳಿಸಿ, ಬೆಳಿಸಿ, ಕಾಪಾಡಿಕೊಂಡರೆ ಮನಸ್ಸೂ ಆರೋಗ್ಯ ಪಡೆಯುವದು ಎಂದು "

" ಮಾತಿನಲ್ಲಿ ಇದೆಲ್ಲ ಸರಿ. ಆದರೆ ಮನಸ್ಸಿನ ರೀತಿಯೇ ಬೇರೆ "

ಅಂದು ಮೂರ್ತಿಯೊಡನೆ ಬಹಳಷ್ಟು ವಾದಿಸಿದೆ. ಆದರೆ ಅವನು ಮಾತ್ರ ಅಚಲನಾಗಿಯೇ ಉಳಿದ. ಪ್ರೇಮಕ್ಕಾಗಿ ಅವನ ತ್ಯಾಗ ಕಂಡು ನನಗೆ ಆಶ್ಚರ್ಯವಾಯಿತು.

\+ \+ \+ \+

" ಏನು ಮೂರ್ತಿ, ನಮಗೆ ಸಿಹಿಕಾಣಿಸದೆ, ಒಂದು ಕಪ್ಪು ಚಹ ತೋರಿಸದೆ ಮದುವೆ ಹೊಡಿಸಿಬಿಟ್ಟಿ ! ಹೌದಪ್ಪ, ಇಂಥ ಸಮಯದಲ್ಲಿ ನಮ್ಮ ನೆನಪೆಲ್ಲಿ ಆಗಬೇಕು ?"

ನಾವು ಮೂವರೂ ಮೂರ್ತಿಯ ಮನೆಗೆ ಧಾಳಿಮಾಡಿದೆವು. ಮೂರ್ತಿಯು ಸೋತು ಉಪ್ಪಿಟ್ಟು ಚಹಗಳ ಕಪ್ಪ ಕಾಣಿಕೆಗಳನ್ನು ಒಪ್ಪಿಸಿದ. ಧ್ವಂಸಮಾಡಿ, ಆಶೀರ್ವದಿಸಿ ಬಂದೆವು.

ಅಂದೇ ಸಂಜೆ ಮೂರ್ತಿಯ ಭೆಟ್ಟಿಯಾಯಿತು ನನಗೆ. " ಏನಪ್ಪ, ಅಂತೂ ಎರಡನೆಯ ಮದುವೆಯನ್ನು ಮಾಡಿಕೊಂಡೆ ಹೌದೋ ಅಲ್ಲೋ ? ಒಳ್ಳೆಯದಾಯಿತು. ನಾನು ಎಂದೋ ಹೇಳಿಲ್ಲವೇ ? ಆಗುವದಿಲ್ಲ ಅಂದರೆ ಹೇಗೆ ?"

" ಹೌದು. ನನ್ನ ದಿವ್ಯ ಪ್ರೇಮಕ್ಕಾಗಿ ಮಕ್ಕಳು ಸರಿಯಾಗಿ ಅನ್ನ ಕಾಣದೆ ಸಾಯಬೇಕೆಂದಿದೆಯೇ ? ಮನಸ್ಸಿರಲಿ ಬಿಡಲಿ. ಅವರಿಗಾಗಿ ಆಗಲೇ ಬೇಕಾಯಿತು."

" ಯಾರಿಗಾಗಿಯೇ ಆಗಲಿ. ಮಾಡಿಕೊಂಡು ಒಳ್ಳೆಯದು ಮಾಡಿದಿ."

" ಒಳ್ಳೆಯದೇನು ? ನನಗೆ ನಿಮಿಷ ನಿಮಿಷಕ್ಕೂ ಮಡಿದವಳ ನೆನಪೇ. ಮಕ್ಕಳು ಬಂದು ' ಅಪ್ಪಾ, ಯಾಕೆ ಹೀಂಗೆ ಸುಮ್ಮನೆ ಕುಳಿತಿದ್ದೀ ' ಅನ್ನು

ತ್ತಾರೆ. ಹೊಸದಾಗಿ ಬಂದ ಪ್ರಾಣಿಗೂ ನಾನು ಮಡಿದವಳ ಫೋಟೋಕ್ಕೆ ಹೂವೇರಿಸುವದು ಇವೆಲ್ಲ ಸೇರುವದಿಲ್ಲ. ಏನೇ ಆದರೂ ಮಕ್ಕಳಿಗೊಂದು ತುತ್ತು ಅನ್ನ ಸರಿಯಾಗಿ ಬೀಳುತ್ತದೆ. ನೋಡು, ನಾವು ಪ್ರೀತಿಸುವ ವಸ್ತು ಇಲ್ಲವಾದಮೇಲೆ, ಆ ವಸ್ತುವಿಗೆ ಸಂಬಂಧಿಸಿದ್ದೆಲ್ಲ ನಮಗೆ ಪ್ರಿಯವಾಗುತ್ತದೆ. ನನಗೂ ಮಕ್ಕಳ ವಿಷಯದಲ್ಲಿ ಹಾಗೇ ಆಗಿದೆ. ನಮ್ಮ ಸರಸಿಯಂತೂ ಥೇಟು ತಾಯಿಯಹಾಗೇ. ಹೀಗಾಗಿ ಅವಳಲ್ಲಿದ್ದ ನನ್ನ ಪ್ರೇಮವೆಲ್ಲ ಈ ಮಕ್ಕಳಲ್ಲಿ ಮೂರ್ತಿಗೊಂಡಿದೆ."

"ಸರಿ. ಸರಿ. ಸಹಜ ಅದು. ಆದರೆ ನಿನ್ನ ಹೊಸ ಹೆಂಡತಿಯ ಕಡೆಗೆ ನೀನು ಎಳ್ಳಷ್ಟೂ ದುರ್ಲಕ್ಷ್ಯ ಮಾಡಕೂಡದು."

"ಲಕ್ಷ್ಯವೂ ಇಲ್ಲ. ದುರ್ಲಕ್ಷ್ಯವೂ ಇಲ್ಲ. ಅವಳಷ್ಟಕ್ಕೆ ಅವಳು ಇರುತ್ತಾಳೆ."

"ಹಾಗೆ ಅವಳಷ್ಟಕ್ಕೇ ಅವಳನ್ನು ಬಿಡಬಾರದು ಮೂರ್ತಿ. ಅವಳೂ ಒಂದು ಜೀವಿಯಲ್ಲವೇ ?"

"ಆದರೆ ಅವಳಂತೆ ಇವಳನ್ನು ನಡಿಸಿಕೊಳ್ಳುವದು ಸಾಧ್ಯವಿಲ್ಲ. ಒಲಿದು ಕೂಡಿದ ಹೆಣ್ಣಿಗೂ ಹೀಗೆ ಮನೆಯ ವ್ಯವಸ್ಥೆಗೆ ತಂದ ಹೆಣ್ಣಿಗೂ ಹೆಚ್ಚುಕಡಿಮೆ ಇದ್ದೇ ಇರುತ್ತದೆ."

"ಇದ್ದೇ ಇರುತ್ತದೆ ಅನ್ನು. ಆದರೂ ಅದನ್ನು ತೋರಿಸಬಾರದು ಮೂರ್ತಿ. ಒಮ್ಮೊಮ್ಮೆ ಕೂಡಿದಮೇಲೆ ಒಲುಮೆ ಚಿಗಿತು ಜೀವನ ಸುಂದರ ವಾಗುತ್ತದೆ."

"ಹು. ಅದೆಲ್ಲ ಹಳೆಯಕಾಲದ ಮಾತು."

ನಾನು ಮಾತು ಬೆಳಿಸಲಿಲ್ಲ. ಅವನ ಆತ್ಮೀಯ ಮಿತ್ರನಾದ ನನಗೆ ಇದಕ್ಕೂ ಹೆಚ್ಚು ನುಡಿಯುವದು ಉಚಿತವೆಂದು ತೋರಲಿಲ್ಲ. ಇಷ್ಟು ಆಡಿದ್ದೇ ಅಧಿಕಪ್ರಸಂಗವಾಯಿತೋ ಎಂದು ಚಿಂತೆ. ಆದರೆ ಅವನ ಮಕ್ಕಳ ಮೇಲಿನ ಪ್ರೀತಿಯಿಂದ ನನಗೆ ಆನಂದವಾಗದೇ ಹೋಗಲಿಲ್ಲ.

\+ + + +

"ಈಗ ಮನೆತುಂಬಿತು ನೋಡು ಮೂರ್ತಿ."

"ಏನು ತುಂಬುವದೋ ! ಕಸದ ಬುಟ್ಟಿಯೂ ತುಂಬುತ್ತದೆ."

" ಛೆ, ಹಾಗೆ ಹೇಳಬಾರದು. ಮಕ್ಕಳು ಮರಿಗಳು ಇದ್ದರೆ ಮನೆ ಗೊಂದು ಕಳೆ ಬರುತ್ತದೆ. "

" ಕೊಳೆಯೂ ಬರುತ್ತದೆ. ಏನೇ ಬಂದರೂ ಅಡ್ಡಿಯಿಲ್ಲ. ಆಡಲಿಕ್ಕಾಗಿ ನೆರೆಮನೆಯ ಮಕ್ಕಳನ್ನೇ ಅವಲಂಬಿಸುವದು ತಪ್ಪಿತು ಈ ಗೋಪು, ಸರಸಿ ಯರಿಗೆ. ಮನೆಯಲ್ಲೇ ಮೂರು ನಾಲ್ಕು ಚಿಕ್ಕವರಾದರು. ಅಲ್ಲದಿದ್ದರೆ ನೋಡು, ಇಬ್ಬರೇ ಆಗುತ್ತಿದ್ದರು. ನಾನು ಎಲ್ಲಾದರೂ ಹೊರಗೆ ಹೋಗ ಬೇಕಾದರೆ ನೆರೆಮನೆಯ ಹುಡುಗರನ್ನು ಕರೆದು ತಂದೋ, ನೆರೆಮನೆಗೆ ಇವರ ನ್ನೊಯ್ದು ಬಿಟ್ಟೋ ಹೋಗಬೇಕಾಗುತ್ತಿತ್ತು. ಮಕ್ಕಳು ಅಂದರೇ ಹಾಗೆ: ಹಿಂಡಾಗಿ ಆಡುತ್ತಿದ್ದರೇ ಅವರು ಸುಮ್ಮನಿರುತ್ತಾರೆ. "

ಮಕ್ಕಳ ಮೇಲಿನ ಪ್ರೀತಿಯಿಂದ ಅವರಿಗಾಗಿ ಮಕ್ಕಳನ್ನು ಒದಗಿಸಿ ಕೊಡುವ ಅವನ ನಿಷ್ಠೆಗೆ ನಾನು ಬೆಪ್ಪಾದೆ.

× × × ×

ಈಗ ಮೂರ್ತಿಯ ಮನೆಯಲ್ಲಿ ಆನಂದ ನೆಲಸಿದೆ. ಅದನ್ನು ಕಂಡು ನನಗೂ ಹಿಗ್ಗು. ಆದರೂ ಹಿಂದಿನದೇ ಧಾಟಿಯಲ್ಲಿ ಮೂರ್ತಿಯೊಡನೆ ನಾಲ್ಕು ಮಾತು ಆಡಲೇಬೇಕೆಂದು ನನ್ನ ನಾಲಿಗೆ ಕುಣಿಯಹತ್ತಿತು.

ಮರುದಿನ ಅವನ ಭೆಟ್ಟಿಯಾಯಿತು. " ಏನಪ್ಪಾ ಮೂರ್ತಿ, ಎಲ್ಲಾ ಕ್ಷೇಮವೇ ? " ರೂಢಿಯಂತೆ ಕೇಳಿದೆ.

"ಕ್ಷೇಮವೇ. ಸಂಸಾರ ಅಂದಮೇಲೆ ನೋಡು ಎಲ್ಲಾ ಇದ್ದುದೇ. "

" ಹಾಗೆಂದರೆ ಹೇಗೆ ? ನಿನ್ನ ಹಾಗೆ ಮಾಟಾಗಿ ಇರುವ ಭಾಗ್ಯ ನನಗಿ ದ್ದಿದ್ದರೆ...."

" ಏನು ಮಾಟಾಗಿರುವದೋ ? ಇದ್ದುದರಲ್ಲೇ ಶಿಸ್ತಾಗಿ ನಡಿಸಿಕೊಂಡು ಹೋಗುತ್ತಾಳೆಂದು ನಡೆದಿದೆ. ಅಲ್ಲದಿದ್ದರೆ ನನ್ನ ಫಜೀತಿ ದೇವರೇ ಬಲ್ಲ. "

" ಅದು ಮುಖ್ಯ ನೋಡು. ಮನೆಯ ಕಾರಭಾರವನ್ನೊಂದು ಹೆಂಗ ಸರು ಸರಿಯಾಗಿ ನೋಡಿಕೊಂಡು ಹೋಗಿಬಿಟ್ಟರೆ ನಮಗೆ ಎಷ್ಟೋ ಆಧಾರ. ನಮ್ಮ ಮನೆಯಲ್ಲಿ ಅದೇ ಇಲ್ಲ. "

" ದೇವರ ದಯೆಯಿಂದ ನಮ್ಮ ಮನೆಯವಳು ಮಾತ್ರ ಚೆನ್ನಾಗಿ ನೋಡಿಕೊಳ್ಳುತ್ತಾಳೆ. ಏನೋ ಅವಳ ಮಕ್ಕಳ ಪುಣ್ಯ. ಇವಳು ಯೋಗ್ಯ ವಾಗಿ ಸಂಬಾಳಿಸಿಕೊಳ್ಳುತ್ತಾಳೆ. ಮತ್ತೆ ನೋಡು, ನಮ್ಮ ಗೋಪು, ಸರಸಿ

ಬಹಳ ತುಂಟರು. ಇವಳು ಅಲ್ಲಿದ್ದರೆ ಬೇರೆ ಯಾರಿಂದಲೂ ನಡಿಸಿಕೊಳ್ಳಲು ಸಾಧ್ಯವಿಲ್ಲ. ಅವಳೇ ಇದ್ದಿದ್ದರೂ ಇಷ್ಟು ಮಕ್ಕಳನ್ನು ಕಾಪಾಡುವದು ಹೇಗಾಗುತ್ತಿತ್ತೋ ”

“ ಒಬ್ಬೊಬ್ಬರ ಶಕ್ತಿ ಅದು. ಎಷ್ಟೇ ಮಕ್ಕಳು ಮರಿಗಳು ಇದ್ದರೂ ಸಮಾಧಾನದಿಂದ ನೋಡಿಕೊಳ್ಳುತ್ತಾರೆ. ನಮ್ಮ ಮನೆಯವಳಿಗಂತೂ ಮಕ್ಕಳು ಕುಯ್ ಅಂದರೆ ಸಿಟ್ಟು ಬರುತ್ತದೆ. ”

“ ಅವಳಿಗೆ ಸಿಟ್ಟು ಬಂದದ್ದನ್ನೇ ನಾನು ಕಾಣಲಿಲ್ಲ. ತನ್ನ ಮಕ್ಕಳು ಬೇರೆಯವರ ಮಕ್ಕಳು ಎಂಬ ಬೇಧವಿಲ್ಲ. ಆದರೆ ಒಂದು. ನಾನು ಅವಳ ನೆನಪು ಮಾಡಿಕೊಂಡು ಏನಾದರೂ ಆಡಿದರೆ ಇವಳಿಗೆ ಆಗುವದಿಲ್ಲ. ದಿನಾ ದಿನಾ ಅವಳ ಫೋಟೋಕ್ಕೆ ಹೂವೇರಿಸುವದೂ ಇವಳಿಗೆ ಸೇರುವದಿಲ್ಲ. ಇದೊಂದು ವಿಷಯದಲ್ಲಿ ಇವಳಿಗೆ ಮೂಗು ಕೆಂಪಾಗುತ್ತವೆ. ಹೆಣ್ಣಿನ ಹೃದಯ ವನ್ನು ಯಾಕೆ ನೋಯಿಸಬೇಕು ಅಂತ ನಾನು ಅವಳ ಫೋಟೋ ಕಿತ್ತು ಇಟ್ಟು ಬಿಟ್ಟೆ. ಅವಳೂ ಹೆಣ್ಣು. ಇವಳೂ ಹೆಣ್ಣು. ತನ್ನ ಮತ್ತು ಅವಳ ಮಕ್ಕಳಲ್ಲಿ ಭೇದಭಾವ ಇಟ್ಟುಕೊಳ್ಳದ ಇವಳಲ್ಲಿ ನಾನೇಕೆ ಭೇದ ಮಾಡ ಬೇಕು ? ಆದರೂ ಅವಳ ನೆನಪಾದಾಗ ಪ್ರಪಂಚವೇ ಶೂನ್ಯವೆನಿಸುತ್ತದೆ. ”

ನನಗೆ ಒಳಗೊಳಗೇ ನಗುಬಂತು. ಏನು ಹೇಳಬೇಕೆಂಬುದು ತಿಳಿಯದೆ “ ಪ್ರಪಂಚ ಶೂನ್ಯವೇ ಇದೆ ಮೂರ್ತಿ. ಆದರೂ ನಾವು ಹಾಗೆ ಅನಿಸಿಕೊಳ್ಳ ಕೂಡದು ” ಎಂದು ಗಂಭೀರವಾಗಿ ನುಡಿದೆ.

ತೋರಿಕೆಗಾಗಿ ಮಡಿದವಳ ಬಗ್ಗೆ ತನ್ನ ‘ದಿವ್ಯಪ್ರೇಮ’ ವನ್ನು ನುಡಿ ಯುವ ಅವನಿಗೆ ನನ್ನ ಗುಟ್ಟು ಹತ್ತಲಿಲ್ಲ. ಜಗತ್ತಿಗೆ ತನ್ನ ‘ ದಿವ್ಯಪ್ರೇಮ ’ ವನ್ನು ಸಾರಲು ಅವನಿಗೊಬ್ಬ ಆತ್ಮೀಯ ಪ್ರಾಣಿ ಬೇಕಿತ್ತು. ಮಾನವನ ಹೃದಯದ ಸೂಕ್ಷ್ಮ ಅಭ್ಯಾಸ ಮಾಡುವ ಕುತೂಹಲವುಳ್ಳ ನನಗೆ ಪ್ರಯೋಗ ಕ್ಕಾಗಿ ಒಂದು ಅರ್ಧ ಚತುಷ್ಪಾದ ಬೇಕಿತ್ತು !

---

# ಜಾತಿಗೇ ಭೂಷಣ!

"ಭಟ್ಟರೇ, ನಿಮಗೆ ಹೇಳಲೊ? ಇಷ್ಟೇಶ್ವರರಾಯರು ಅಂದರೆ ನಮ್ಮ ಜಾತಿಗೇ ಭೂಷಣ. ಅವರು ವಕೀಲಿ ಮಾಡಲು ಸುರು ಮಾಡಿದಂದಿನಿಂದ ಬೇರೆ ಜಾತಿಯವರ ಸೊಕ್ಕು ಮುರಿದಿದೆ. ಈಗ ಶೆಟ್ಟಿ ಶಾನಬೋಗರೆಲ್ಲ ಅವರಿಗೆ ರಾಯರೇ ಎಂದು ಸಲಾಮು ಮಾಡುವವರೇ!

ನಿಮಗೆ ಹೇಳಲೊ? ಅದು ಒಬ್ಬೊಬ್ಬರ ಜನ್ಮಕುಂಡಲಿ ಇದ್ದ ಹಾಗೆ. ನೀವೂ ಬಿ. ಎ. ಆಗಿದ್ದೀರಿ. ಮೆಟ್ರಿಕ್ಕೂ ಆಗಿದ್ದೀರಿ. ಆದರೆ ನಿಮ್ಮ ಹಣೆಯಲ್ಲಿ ಮಾಸ್ತರಿ ಬರೆದಿದೆ. ವಕೀಲಿ ಮಾಡಿ ದೊಡ್ಡವರಾಗುವದು ನಿಮ್ಮ.... ಬೇಜಾರು ಮಾಡಿಕೊಳ್ಳಬೇಡಿ. ನೀವು ದೊಡ್ಡವರಾದರೆ ನಮಗೆಲ್ಲ ಆನಂದವೇ. ದೇವರ ಇಚ್ಛೆ ಏನಿದೆ ಅಂತ ಹೇಳಲಾಗದು.

ನಾನು ನೋಡುತ್ತ ನೋಡುತ್ತ ಇದ್ದಂತೆ ಇಷ್ಟೇಶ್ವರ ಭಟ್ಟರು ರಾಯರು ಆಗಿಬಿಟ್ಟರು! ಈಗ ಅವರ ಮನೆಯ ಥಾಟು ನೋಡಿದರೆ ನಮ್ಮ ಜಾತಿಯಲ್ಲಿ ಒಬ್ಬರಾದರೂ ಹೀಗೆ ವೈಭವದಿಂದ ಇದ್ದಾರಲ್ಲ ಅನಿಸುತ್ತದೆ. ಮನಸ್ಸಿಗೆ ಸಂತೋಷವಾಗುತ್ತದೆ. ಮತ್ತೆ ಎಷ್ಟು ಸೌಜನ್ಯ ತುಂಬಿದೆ ಅವರಲ್ಲಿ! ಯಾರೇ ಹೋಗಲಿ, ಮಾತಾಡಿಸುತ್ತಾರೆ. ತಾನು ದೊಡ್ಡ ವಕೀಲ ಅಂತ ಗರ್ವವಿಲ್ಲ. ಇನ್ನೊಂದು ಸಂಗತಿಯೆಂದರೆ ಇಷ್ಟು ಕಲಿತರೂ ದೇವರು-ದಿಂಡರು-ಮಡಿ-ಮೈಲಿಗೆ ಬಿಟ್ಟವರಲ್ಲ. ನೋಡಿ, ನಿಮ್ಮ ತಲೆಗೆ ಜುಟ್ಟವಿಲ್ಲ. ಈಗಿನ ಕಾಲವೇ ಹಾಗೆ. ನಾಲ್ಕು ಅಕ್ಷರ ಇಂಗ್ಲೀಷು ಕಲಿತ ಕೂಡಲೇ ಜಂಬ ಬಂದುಬಿಡುತ್ತದೆ. ರಾಯರಿಗೂ ಕ್ರಾಪು ಇದೆ ಎನ್ನಿ. ಆದರೆ ಅದರ ನಡುವೆ ಒಂದು ಜುಟ್ಟವೂ ಇದೆ. ಬ್ರಾಹ್ಮಣ ಅಂದಮೇಲೆ ಬೇಕು ನೋಡಿ. ದೈವ ದೇವರು ಕೈಬಿಡಬಾರದು.

ಇನ್ನೊಂದು ವಿಷಯ ಹೇಳಲೊ ನಿಮಗೆ? ಚಿಲ್ಲರೆ ವಕೀಲರ ಹಾಗೆ ಅದನ್ನು ತಂದುಕೊಡಿ, ಇದನ್ನು ಕಳುಹಿಸಿ ಅನ್ನುವವರಲ್ಲ ರಾಯರು. ಆದರೆ ನೋಡಿ, ಅವರ ಮನೆಗೆ ರಾಶಿರಾಶಿಯಾಗಿ ಅಡಿಕೆ, ತೆಂಗು, ಬೆಲ್ಲ, ತುಪ್ಪ

ಬಂದು ಬೀಳುತ್ತವೆ. ಅದು ಅವರ ಜನ್ಮಾವಸ್ಥೆ, ಭಟ್ಟರೆ. ನಮ್ಮಂಥವರಿಗೆ ರಾಯರ ಮನೆಗೆ ಒಂದು ಬಾಳೆ ಕೊನೆ ಕೊಟ್ಟು ಬಂದರೆ ಏನೋ ತೃಪ್ತಿ. ಅಂಥ ದೊಡ್ಡ ಮನುಷ್ಯರು ನಮ್ಮ ತೋಟದ ಹಣ್ಣು ತಿಂದರಲ್ಲ ಎಂಬ ಆನಂದ ! ದೊಡ್ಡವರ ಬಾಯಿಗೆ ಬೀಳಲಿಕ್ಕೂ ಒಂದು ಪುಣ್ಯ ಬೇಕು ನೋಡಿ. "

" ನಿಮಗೆ ತಿಳಿಯಿತೋ ?........ "

ಈಗ " ತಿಳಿಯಿತು ಹೆಗಡೇರೆ " ಅನ್ನದೆ ಇರಲು ಸಾಧ್ಯವಾಗಲಿಲ್ಲ. ವಕೀಲಿಯಿಂದ ಹಣ ಗಳಿಸಿ ಮೆರೆಯುವ ಜಾತಿಯ ಒಬ್ಬ ಜೀವಿಯನ್ನು ಹೀಗೆಲ್ಲ ಆರಾಧಿಸುವ ಹೆಗಡೆಯವರ ಹುಂಬತನಕ್ಕಾಗಿ ಮನ ನೊಂದು ಕೊಂಡಿತು. ನೋಡಿದರೆ ಇಡೀ ಚೌಕು ಗ್ರಾಮಕ್ಕೇ ಮುಖಂಡರೆನಿಸುವ ಹೆಗಡೆಯವರು. ಏನು ಹೇಳಬೇಕೆಂಬುದೇ ತಿಳಿಯಲಿಲ್ಲ. ಅವರಂತೆ ನಮ್ಮ ಜಾತಿಯಲ್ಲಿ ರಾಯರಂಥ ದೊಡ್ಡವರೂ ಇದ್ದಾರೆಯೆಂದು ಹೆಮ್ಮೆ ತಾಳಬೇಕೊ? ಅಥವಾ ಇವರ ಹುಂಬತನಕ್ಕೆ ನಗಬೇಕೋ ?

" ನಿಮಗೆ ತಿಳಿಯಿತೋ ಭಟ್ಟರೆ, ನಮ್ಮ ಜಾತಿಯಲ್ಲಿ ರಾಯರಂಥವರು ಒಬ್ಬಿಬ್ಬರಿದ್ದರೂ ಸಾಕು. ಜಾತಿಗೇ ಒಂದು ಭೂಷಣ. "

" ಜಾತಿಯವರಿಗಾಗಿ ವಕೀಲರು ಏನೇನು ಮಾಡಿದ್ದಾರೆ ಹೆಗಡೇರೆ ? "

" ಏನು ಮಾಡಿದ್ದಾರೆ ಅಂದರೆ ? ಏನು ಮಾಡಬೇಕು ಅವರು ? ನಮ್ಮ ಜಾತಿಗೇ ಹೆಸರು ತಂದುಕೊಟ್ಟಿದ್ದಾರೆ. ಬೇರೆ ಜಾತಿಯವರು ಈಗ ಸ್ವಲ್ಪ ನಮ್ಮ ಜಾತಿಯಲ್ಲೂ ಕಲಿತವರು ಇದ್ದಾರೆ ಎಂಬುದನ್ನು ಅರಿತಿದ್ದಾರೆ. ನಮ್ಮ ಜಾತಿಗೆ ಮರ್ಯಾದೆ ಕೊಡುತ್ತಾರೆ. "

" ಓಹೋ ಹಾಗೋ ! ವಕೀಲರನ್ನು ಕಂಡಕೂಡಲೇ ಇತರರೂ ಅವ ರಿಗೆ ಮಾಡುವ ನಮಸ್ಕಾರ ನಮ್ಮ ಜಾತಿಗೇ ಅನ್ನಿ, ಹಾಗಾದರೆ ! ! "

" ಮತ್ತೆ ? "

" ಅದಂತೂ ಆಯಿತು ಬಿಡಿ. ನಮ್ಮ ಜಾತಿಯವರ ಶಿಕ್ಷಣಕ್ಕೆ, ಸಮಾಜ ಸುಧಾರಣೆಗೆ....ಇದಕ್ಕೆಲ್ಲ ಅವರು ಏನೇನು ಮಾಡಿದ್ದಾರೆ ಅಂದೆ."

" ಭಾಳ ಮಾಡಿದ್ದಾರೆ. ಸಂಸ್ಕೃತ ಸಾಲೆಗೆ ಮೊನ್ನೆ ಮೊನ್ನೆ ಮೂರು ರೂಪಾಯಿ ಕೊಟ್ಟಿದ್ದಾರೆ...."

ನನಗೆ ನಗು ತಡೆಯಲಾಗಲಿಲ್ಲ,

" ನೋಡಿ ಹೆಗಡೇರೆ, ರಾಯರ ಕಕ್ಷಿಗಾರರೆಲ್ಲ ನಮ್ಮ ಜಾತಿಯವರೇ ಅಲ್ಲವೇ ?"

" ಎಲ್ಲ ನಮ್ಮ ಜಾತಿಯವರೇ ಅಲ್ಲ. ಜಾತಿಯ ವಕೀಲರೇ ಇರುವಾಗ ಬೇರೆ ಜಾತಿಯ ವಕೀಲರ ಹತ್ತರ ಹೋಗುವದು ತಪ್ಪಾಗುವದಿಲ್ಲವೆ ? ಇನ್ನು ವಿರುದ್ಧ ಪಕ್ಷದವರು ಬೇರೆ ವಕೀಲರ ಹತ್ತರ ಹೋಗುತ್ತಾರೆ. ಆದರೆ ಕೋರ್ಟಿನ ಕೆಲಸ ಅಂದಕೂಡಲೇ ಮೊದಲಿಗೆ ಬರುವದು ರಾಯರ ಮನೆಗೇ."

" ಅಂದರೆ ರಾಯರ ಸಂಪತ್ತೆಲ್ಲ ನಮ್ಮ ಜಾತಿಯವರಿಂದ ಬಂದದ್ದೇ ಅನ್ನಿ."

" ಸಂಶಯವೇ ? ಜಾತಿಯವರ ಹಣ ಜಾತಿಯವರಿಗೆ ಹೋಗುವದು ನ್ಯಾಯ."

" ಓಹೋ ಸರಿ ಸರಿ. ಅದಿರಲಿ ಹೆಗಡೇರೆ. ಕೋರ್ಟಿನ ಮೆಟ್ಟಲು ಹತ್ತಿದ ನಮ್ಮ ಜಾತಿಯ ಎಷ್ಟು ಕುಟುಂಬಗಳು ಹಾಳಾದವು ?"

" ಅರೆ ! ಸಾವಿರಾರು ಮನೆ-ಗುಂಪ ಬಿದ್ದು ಹೋಗಿದ್ದಾವೆ. ನಮ್ಮೂರ ಲ್ಲಿಯೇ ಇಪ್ಪತ್ತು ಇಪ್ಪತ್ತೈದು ಕುಟುಂಬ ಇತಿಶ್ರೀ ಆಗಿವೆ. ಕೋರ್ಟಿನ ಪ್ರಭಾವ ಅಂದರೆ ಏನೆಲ್ಲ ಆಗುತ್ತದೆ ಅಂತ ಹೇಳಲು ಬರುವದಿಲ್ಲ. ನೋಡಿ ನಿಮಗೊಂದು ಸಂಗತಿ ಹೇಳುತ್ತೇನೆ...."

" ತಡೆಯಿರಿ, ಹೆಗಡೇರೆ. ಇಷ್ಟೆಲ್ಲ ಕುಟುಂಬ ಹಾಳಾಯಿತು ಅನ್ನು ತ್ತೀರಿ. ರಾಯರೇ ಈ ಕುಟುಂಬಗಳ ವಕೀಲಿ ಮಾಡಲಿಲ್ಲವೇ ?"

" ಹೆಚ್ಚಾಗಿ ಎಲ್ಲ ' ಕೇಸೂ ' ರಾಯರ ಹತ್ತಿರವೇಹೋಗಿದ್ದವು. ಆದರೆ ವ್ಯಾಜ್ಯ ಅಂದಮೇಲೆ ಹೀಗೆ ಆಗುವದೇ."

" ಒಂದೊಂದು ದಾವೆಗೆ ಹಾಳಾದ ಈ ಮನೆತನಗಳು ಎಷ್ಟೆಷ್ಟು ಹಣ ಸುರಿದಿರಬಹುದೆಂದು ನಿಮ್ಮ ತರ್ಕವಿದೆ ?"

" ಸಾವಿರ ಗಟ್ಟಲೆ ಹಣ ಸುರಿದೇ ಹಾಳಾದದ್ದಲ್ಲವೇ ?"

" ಹಾಗಾದರೆ ಈ ಸಾವಿರ ಗಟ್ಲೆ ಹಣದ ಬಹುಭಾಗ ರಾಯರ ಮನೆ ಯನ್ನೇ ಸೇರಿತು ಅನ್ನಿ!"

" ಹಾಗೆಂದರೆ ಹೇಗೆ ? ವಕೀಲಿ ಮಾಡಿದ್ದಕ್ಕಾಗಿ ಅವರು ಹಣ ತೆಗೆದು ಕೊಂಡರು. ನಸೀಬ ಕೆಟ್ಟು ಎಷ್ಟೋ ಮನೆತನಗಳು ಹಾಳದವು. ಹೀಗಿರು

ವಾಗ ರಾಯರ ಮನೆಗೆ ಆ ಹಾಳಾದ ಕುಟುಂಬಗಳ ಹಣವೆಲ್ಲ ಬಂದಿತೆಂದು ಹೊಟ್ಟೆಕಿಚ್ಚು ಪಟ್ಟುಕೊಳ್ಳುವದು ಸರಿಯಲ್ಲ. ಯಾರ್‍ಯಾರಿಗೆ ಎಷ್ಟೆಷ್ಟು ಸಲ್ಲಬೇಕೋ ಅಷ್ಟಷ್ಟೇ ಸಲ್ಲುತ್ತದೆ."

"ನೋಡಿ, ಹೆಗಡೇರೆ, ಒಬ್ಬ ಕಳ್ಳ ಬಂದು ರಾತ್ರೆಬೆಳಗಾಗುವುದರೊಳಗೆ ಇಡೀ ಕೇರಿಯ ಮನೆಯನ್ನೆಲ್ಲ ಇತಿಶ್ರೀ ಮಾಡಿಕೊಂಡು ಹೋಗುತ್ತಾನೆಂದು ತಿಳಿಯಿರಿ."

"ಕಳ್ಳ ಅಂದಕೂಡಲೆ ನೆನಪಾಯಿತು. ನೋಡಿ ಮೊನ್ನೆ ನಮ್ಮ ನೆರೆ ಮನೆಯ....ಅಂತೂ ಕಳ್ಳರು ಬಹಳವಾಗಿದ್ದಾರೆ. ಇವರಿಗೆಲ್ಲ ಸರಕಾರದವರು ಗುಂಡುಹಾಕುವದಿಲ್ಲ ಏಕೋ ?"

"ನಮ್ಮ ಜಾತಿಯವನೇ ಕಳವುಮಾಡಿ ಶ್ರೀಮಂತನಾಗಿ 'ರಾಯರು' ಅನಿಸಿಕೊಂಡು ಮೆರೆದರೆ ಅವನು ನಮ್ಮ ಜಾತಿಗೇ ಭೂಷಣನಾಗುವದಿಲ್ಲವೇ?"

"ಅಂತೂ ಇಷ್ಟೆಲ್ಲ ದ್ರಾವಿಡ ಪ್ರಾಣಾಯಾಮಮಾಡಿ ರಾಯರು ಕಳ್ಳರು ಅಂತ ನಿಮ್ಮ ಅಭಿಪ್ರಾಯವಲ್ಲವೋ ಹೌದೋ ?"

"ಅನ್ನ ಅಭಿಪ್ರಾಯ ಹಾಗಲ್ಲ. ವಿಚಾರಮಾಡಿದರೆ ಹಾಗೆ ಅನಿಸುತ್ತದೆ ಅಷ್ಟೇ."

ಹೆಗಡೆಯವರಿಗೆ ನನ್ನ ಮಾತು ಹಿಡಿಸಲಿಲ್ಲ. ಬೇಸರ ಗೊಂಡವರಂತೆ ಅವರು ಅಡ್ಡಮೋರೆ ಹಾಕಿದರು. ನನ್ನ ಮೇಲೆ ಅವರು ಸಿಟ್ಟಿಗೆದ್ದರೂ ಚಿಂತೆ ಯಿಲ್ಲವೆಂದು ಹೇಳಿದೆ.

"ಹೆಗಡೇರೆ, ಜಾತಿಯ ಅಭಿಮಾನ ತೋರಿಸಿ ಹಳ್ಳಿಯ ಹುಂಬರನ್ನು ಕೋರ್ಟಿನ ನೆವದಿಂದ ಸುಲಿದುಕೊಳ್ಳುವದು ದೊಡ್ಡಸ್ತನವಲ್ಲ. ಅದಕ್ಕಾಗಿ ನೀವು ರಾಯರನ್ನು ತಲೆಯಮೇಲಿಟ್ಟುಕೊಂಡು ಪೂಜಿಸಬೇಕಾಗಿಲ್ಲ. ನಿಮ್ಮೆಲ್ಲರಿಂದ ತಾನು ಜಾತಿಗೇ ಭೂಷಣ ಎಂದೆನಿಸಿಕೊಂಡು ಶ್ರೀಮಂತರಾಗುವ ಯುಕ್ತಿ ಅವರಿಗಿದೆ. ಅವರನ್ನು ದೊಡ್ಡವರೆಂದು ಹೊಗಳಿ ಅವರ ಬುರುಡೆಯೊಳಗೆ ಬೀಳುವ ಬುದ್ಧಿ ನಿಮಗಿದೆ !"

"ನೀವು ಇಷ್ಟು ಹೇಳಿದಮೇಲೆ ನಾನೂ ಒಂದು ಮಾತು ಹೇಳಿಬಿಡಲೆ? ವಕೀಲಿಯನ್ನೋ ಕಾರ್ಕೂನಿಕೆಯನ್ನೋ ಮಾಡಿ ಹಣಗಳಿಸಲಾಗದೆ ಹೊಟ್ಟೆ ಕಿಚ್ಚಿನಿಂದ ನೀವು ಈ ಮಾತು ಅನ್ನುತ್ತೀರಿ. ಅಲ್ಲವೇ ಮಾಸ್ತರರೇ ?........"

ಅಂದು ಹೆಗಡೆಯವರೂ ನಾನೂ ತುಸು ಸಿಡಿದುಕೊಂಡರೂ ಮತ್ತೆ ಇಲ್ಲದ ಪುರಾಣಗಳಿಂದ ಗೆಳೆಯರಾದೆವು. ರಾಯರ ಘನತೆಯನ್ನು ತೋರಿಸಿ ಕೊಡುವೆನೆಂದು ಹೆಗಡೆಯವರಿಗೆ ಹೇಳಿದೆ. ಅವರೂ ಒಪ್ಪಿಕೊಂಡರು.

ರಾಯರೊಡನೆ ನನಗಿದ್ದ ಅಲ್ಪ ಸ್ವಲ್ಪ ಬಳಿಕೆಯನ್ನು ಹೆಚ್ಚಿಸಿಕೊಂಡೆ. ನಮ್ಮ ಜಾತಿಯ ಒಂದು ಸಭೆ ಕರೆದು ಜಾತಿಯ ಬಡಮಕ್ಕಳ ಶಿಕ್ಷಣಕ್ಕಾಗಿ ಒಂದು ಫಂಡು ಕೂಡಿಸಬೇಕೆಂಬ ಯೋಜನೆಯನ್ನು ಕುರಿತು ರಾಯರೊಡನೆ ಹತ್ತು ಹದಿನೈದು ದಿನ ಚರ್ಚಿಸಿದೆ. ಅದರ ಉತ್ತರ ನಾನು ನಿರೀಕ್ಷಿಸಿದ್ದೇ ಆಯಿತು !

ಈಗ ನಾನೂ ರಾಯರೂ ತುಂಬಾ ಪರಿಚಿತರು. ಪರಸ್ಪರರ ಅಭಿಪ್ರಾಯಗಳನ್ನು ಭಿಡೆಯಿಲ್ಲದೆ ಒಬ್ಬರೊಬ್ಬರೆದುರು ವ್ಯಕ್ತಮಾಡುತ್ತೇವೆ.

× × × ×

" ನೀವು ಇಲ್ಲೇ ಕುಳಿತು ನಮ್ಮ ಮಾತುಕತೆಯನ್ನು ಕೇಳಿರಿ " ಎಂದು ಹೆಗಡೆಯವರನ್ನು ಹೊರಗೆ ಕೂಡ್ರಿಸಿ ರಾಯರನ್ನು ಕಾಣಹೋದೆ.

" ಮತ್ತೆ ಜಾತಿಯಮಕ್ಕಳ ಶಿಕ್ಷಣ ಅನ್ನುತ್ತ ಬಂದಿರಿ ಹೌದೋ ಅಲ್ಲವೋ ? ನೋಡಿ ಭಟ್ಟರೆ, ನಿಮಗೆ ಮಾಸ್ತರಿಕೆಯಿಂದ ಬರುವ ಸಂಬಳ ಸಾಲದಿದ್ದರೆ ನಾಲ್ಕು ಮನೆಗಳ ಖಾಸಗೀ ಶಿಕ್ಷಣ ಹಿಡಿದುಕೊಡುವೆ. ತಿಂಗಳಿಗೆ ೨೦–೨೫ ರೂ. ಹೆಚ್ಚಿಗೆ ಆಗಬಹುದು ನಿಮ್ಮ ಉತ್ಪನ್ನ. ಆದರೆ ಈ ಜಾತೀ ಮಕ್ಕಳ ಶಿಕ್ಷಣವನ್ನೇಕೆ ಸುತ್ತುಕೊಳ್ಳುತ್ತೀರಿ ? ನಮ್ಮ ಜಾತಿಯನ್ನು ಸುಧಾರಿಸಿಕೊಳ್ಳಲಿಕ್ಕೆ ಬ್ರಹ್ಮ ಸರಸ್ವತಿಯರೆಲ್ಲ ಬಂದರೂ ಸಾಲದು. ಅಜ್ಞಾನ ಅಹಂಕಾರಗಳಲ್ಲಿ ಅದು ಕೊಳೆಯುತ್ತಿದೆ. ಅದರ ಗೊಡವೆಯೇಕೆ ? ಜೇಷ್ಟೆಗಾಗಿ ಹೇಳುತ್ತೇನೆ ಮಿಸ್ಟರ್ ಭಟ್, ನಮ್ಮ ಜಾತಿಯವರೆಲ್ಲ ಸುಶಿಕ್ಷಿತರಾಗಿ ಬಿಟ್ಟರೆ ನಮ್ಮಂಥ ವಕೀಲರು ಸಾಯಬೇಕೆ ? ! ( Dont take me seriously ! ) ಇನ್ನೂ ನಿಮ್ಮ ಹಟವಿದ್ದರೆ ಮಾಡಿರಿ. ಅಲ್ಲ ಅನ್ನುವದಿಲ್ಲ. ನನ್ನ ಪಾಲಿನ ವಂತಿಗೆಯನ್ನು ಕೊಡುತ್ತೇನೆ. ಆದರೆ ನಾನೇ ಅದರ ಅಧ್ಯಕ್ಷನಾಗಬೇಕೆಂದರೆ ಸಾಧ್ಯವಿಲ್ಲ. ನನ್ನ ಕೆಲಸವೇ ನನಗೆ ಭಾರವಾಗಿದೆ. ಇದಕ್ಕೆಲ್ಲ ವೇಳೆಯೇ ಸಿಗುವದಿಲ್ಲ.... "

ನಾನು ಹೊರಗೆ ಬರುವಾಗ ಹೆಗಡೆಯವರು ತಮ್ಮ ಎರಡೂ ಕಿವಿಗಳನ್ನು ಎಳೆದು ಗೇಣುದ್ದ ಮಾಡಿಕೊಂಡು ಕುಳಿತಿದ್ದರು.

---

# ಮೀನದ ಪರಿಮಳ*

ಮೀನ ಮಾರಿ ಮರುಳುವಾಗ ಕತ್ತಲಾಯಿತು. ಪರಿಚಿತರಾದ ಯೆಂಕಟ ಆಚಾರ‍್ರ ಮನೆಯ ಅಂಗಳದಲ್ಲೇ ' ಹಮ್ಕೊಂಡು ' ' ಹೊತ್ತಾರೆ ' ಹೋಪರಾಯಿತೆಂದು ಅವರು ನಿಶ್ಚಯಿಸಿದರು.

ಆಚಾರಿಯ ಮನೆಯಲ್ಲಿ ಅಂದು ಸತ್ಯನಾರಾಯಣವಾಗಿತ್ತು. ಬಾಗಿಲಿಗೆ ಬಂದ ಅಂಬಿಗಿತಿಯರಿಗೆ ಅಂಗಳದ ತುದಿಗೆ ಮಲಗಲು ಜಾಗ ಕೊಡದಷ್ಟು ಕೆಟ್ಟವನಲ್ಲ ಆಚಾರಿ. " ಓಹೋ ಆಚಾರ‍್ರ ಮನೇಲಿಯೇನೋ ಇಶೇಷ ಅಂತ್ಕಾಣ್ತೀದು ! " ಎಂದು ಅಂಬಿಗಿತಿಯರು ಹೇಳಿದ ಮೇಲೆ ಅವರಿಗೆ ಒಂದು ಚೂರು ಅದು ಇದು ಕೊಡದೆ ಇರಲೂ ಅವನಿಂದಾಗಲಿಲ್ಲ.

ದಣಿದುಬಂದ ಅಂಬಿಗಿತಿಯರು ಅಂಗಳದ ತುದಿಗೆ ಗೊರೆಯಹತ್ತಿದರು. ಸತ್ಯನಾರಾಯಣವಾದ್ದರಿಂದ ಹೂವು ಕಪ್ಪುರ ಊದುಬತ್ತಿಗಳ ನರುಗಂಪು ಆಚಾರಿಯ ಮನೆಯೊಳಗೂ ಆ ವಠಾರದಲ್ಲೂ ತುಂಬಿಕೊಂಡಿತ್ತು.

" ಯೇನೇ ಅಕ್ಕಾ, ವರ್ಕ ಬರ್ಲಿಲ್ವನೇ ? "

" ನಿನ್ಗೂ ಬರ್ಲಿಲ್ವೊ ನೋಡ್ತೆ "

" ಇಲ್ವೆ. ಯೇನೋ ಒಂದ್ ನಮೂನಿ ನಾತ ಬತ್ತಿದು. "

" ನನ್ಗೂ ಅದೇ ನೋಡು. "

" ಯೇನ್ಮಾಡ್ವ ? ನನ್ಗೆ ಇಲ್ಲಿ ವರ್ಕ ಬರ್ವಾಂಗೇ ಇಲ್ಲ "

" ನನ್ಗೂ ಹಾಗೇ. ತೋಟಕ್ ಹೋಗಿ ಹಮ್ಕಂಬನೆ ? "

ಆ ಕೆಂಪಿನಿಂದ ನಿದ್ದೆ ಉಡುಗಿ ಹೋಗಲು ಇಬ್ಬರೂ ವಿಚಾರಿಸಹತ್ತಿದರು. " ಬೇಡ್ವೆ. ಇಲ್ಲೇ ನಂ ಬುಟ್ಟಿ ತಂದಿಟ್ಕಂಬ " ಎಂಬ ನಿರ್ಣಯಕ್ಕೆ ಬಂದರು.

---

* ಕೇಳಿದ ಕತೆ

ಆಚಾರಿಯ ಮನೆಯೆದುರು ಕಂಪು ಬೀರಲು ತರಬಾರದೆಂದು ತೋಟ ದಲ್ಲಿಯೇ ಬಿಟ್ಟುಬಂದ ಮೀನಿನ (ಖಾಲಿಯಾದ) ಬುಟ್ಟಿಗಳನ್ನು ತಲೆಬದಿಗೆ ಇಟ್ಟುಕೊಂಡರು.

ಮೀನು ಇರದಿದ್ದರೂ ಬುಟ್ಟಿಗೆ ಪರಿಮಳ ಇದ್ದೇ ಇತ್ತು. ಇದರಿಂದ ಊದಬತ್ತಿ, ಕಪ್ಪುರ, ಹೂಗಳ 'ನಾತ' ಓಡಿಹೋಯಿತು.

ಅಂಬಿಗಿತಿಯರಿಗೆ ತಮ್ಮ ಗುಡಿಸಲಿನಲ್ಲೇ ಮಲಗಿದಷ್ಟು ಸುಖವಾಗಿ ನಿದ್ದೆ ಹತ್ತಿತು.

---

# ಕವಿಯ ಕೋಪ

ಕವಿವರ್ಯ ಭೃಗು ಅವರ ಹೆಸರು ಕೇಳದವರು ಯಾರು ? ಅವರ ಮಗನಿಗೆ ಮಾತ್ರ ತಂದೆಯ ಕವಿತ್ವದ ಬಗ್ಗೆ ಎಳ್ಳಷ್ಟೂ ವಿಶ್ವಾಸವಿಲ್ಲ. " ನಮ್ಮಪ್ಪ ಸಂಥವರೆಲ್ಲ ಕವಿಗಳಾದರೆ ತೀರಿತು ! " ಎಂದು ಅವನು ನಿಸ್ಸಂಕೋಚವಾಗಿ ಹೇಳುತ್ತಾನೆ.

ಅವನಿಗೆ ಕತೆ ಕಾದಂಬರಿಗಳೆಂದರೆ ತುಂಬ ಪ್ರೀತಿ. ಒಂದು ರಾತ್ರಿ, ಭೃಗು ಅವರು ಅರ್ಧ ನಿದ್ರೆಯಲ್ಲೇ ಎದ್ದು ನಿಸರ್ಗದ ಕರೆಗೆ ಓಗೊಟ್ಟು ಹೊರಗೆ ಬಂದರು. ಒಂದು ಘಂಟೆ ರಾತ್ರಿಯಾಗಿರಬೇಕು. ಮಗನ ಕೋಣೆಯಲ್ಲಿ ಇನ್ನೂ ದೀಪ ಉರಿಯುತ್ತಿದ್ದುದನ್ನು ಕಂಡು, ಕೋಪಿಸಿಕೊಂಡು " ಸೊ....ಮಗನೆ, ಇನ್ನೂ ಎಣ್ಣೆ ಸುಡುತ್ತಿದ್ದೀಯಾ ಹಾಳು ಕಾದಂಬರಿ ಓದುತ್ತಾ ? " ಎಂದು ಅಬ್ಬರಿಸಿದರು.

" ಇಲ್ಲ ಅಪ್ಪ. ನಾನು ಕಾದಂಬರಿ ಓದುತ್ತಿಲ್ಲ. ನಿನ್ನ ಹೊಸ ಹೊಸ ಕವಿತೆಗಳಿಗೆ ಧಾಟಿ ಕೂಡಿಸುತ್ತಿದ್ದೇನೆ. "

ಕವಿವರ್ಯರಿಗೆ ಏನೋ ದಿವ್ಯ ಸ್ಪರ್ಶವಾದಂತಾಗಿ " ಎಣ್ಣೆ ಸುಟ್ಟರಷ್ಟಕ್ಕಲ್ಲ. ನಾನು ಹೇಳಿದ್ದು. ಆದರೆ ರಾತ್ರೆ ಬಹಳ ಹೊತ್ತು ಓದುವದರಿಂದ ಆರೋಗ್ಯ ಕೆಡುತ್ತದೆ. ಸಾಕು, ಇನ್ನು ಮಲಗಿಕೊ........ಕವಿತೆ ಹೇಗೆ ಅನಿಸುತ್ತವೆ ? "

# ಫ್ರೋಟೋ

ಮಹಾರಾಣಿಯ ಎದುರಿಗೆ ಕ್ಯಾಮೆರಾ ಸಜ್ಜಾಗಿ ನಿಲ್ಲಿಸಿ “ಸ್ವಲ್ಪ ಬಲಕ್ಕೆ....ಹ್ಞ.... ಸರಿ.... ಸ್ಟೆಡಿಪ್ಲೀಜ್....ಸ್ವಲ್ಪ ಹೀಗೆ.... ಇನ್ನಿಷ್ಟು ಕಣ್ಣೀರು ಪ್ಲೀಜ್....ಕೊಂಚ ಜೋರಾಗಿ ಅಳಬೇಕು ಮ್ಯಾಡಮ್....ಸರಿ ಸರಿ ಸ್ಟೆಡಿ ಪ್ಲೀಜ್. ಒನ್....ಟೂ....ಥ್ರೀ” ಅನ್ನಲಿಕ್ಕೂ ಮಹಾರಾಣಿಯವರು ಗೋಳೋ ಎಂದು ಅಳಲಿಕ್ಕೂ ಸರಿಯಾಯಿತು. ಫೋಟೋ ಚೆನ್ನಾಗಿ ಮೂಡಿತೆಂದು ಹಿಗ್ಗಿ “ಥ್ಯಾಂಕ್ ಯು” ಅಂದ ಫೋಟೋಗ್ರಾಫರ!

ಕ್ಯಾಮರಾವನ್ನು ಕಟ್ಟಿಕೊಂಡು ಅವನು ಹೊರಗೆ ನಡೆದ. ತನ್ನ ಗಂಡನು ಸತ್ತುದಕ್ಕಾಗಿ ತನಗಾದ ದುಃಖದ ಫ್ರೋಟೋ ತೆಗೆಯಿಸಿ, ಫ್ರೋಟೋಕ್ಕೆ ಕುಳಿತಾಗ ಹರಿಸಿದ ಕಂಬನಿಯನ್ನು ಒರಸಿಕೊಳ್ಳುತ್ತ ಮಹಾರಾಣಿಯವರು ಒಳ ಸೇರಿದರು. ಮಹಾರಾಣಿಯ ದುಕ್ಕದ “ಪ್ರೋಜ್” ಬಹಳ ಚೆನ್ನಾಗಿ ಆಯಿತೆಂದೂ ಅದನ್ನು ಕಂಡು ತಮಗೂ ಅಳು ಬಂದಿತೆಂದೂ ಸೇವಕಿಯರು ಅಂದುಕೊಂಡರು.

---

# ಲಕ್ಷ್ಮೀದೇವಿ

"ಎಲ್ಲಿ ಹೋಗಿ ಸತ್ತನೋ ಏನೋ ತಿಮ್ಮ, ಎಂಟು ಗಂಟೆಯಾದರೂ ಬರಲೇ ಇಲ್ಲ. ಏ...." ಎಂದು ಒಳಗೆ ಶ್ರೀಮತಿ ಲಕ್ಷ್ಮೀದೇವಿಯವರು ಎಂಟು ಗಂಟೆಯಾದರೂ ಬರದಿದ್ದ ಆಳಿನ ಮೇಲೆ ಕೋಪಿಸಿಕೊಂಡರು.

ಚಹಕ್ಕೆ ಒಳಗಿನಿಂದ ಕರೆಬರಲಿಲ್ಲವೆಂದು ಲಕ್ಷ್ಮೀಪತಿರಾಯರು ಹೀಗೆ ಇಣಿಕಿನೋಡಿದರು. ಪತ್ನಿಯು ಸಿಟ್ಟಿನಿಂದ ಏನೇನೋ ಹಲುಬುತ್ತ ಕೋಣೆ ಯಿಂದ ಕೋಣೆಗೆ ಸುಳುಮುಳು ಅಲೆಯುತ್ತಿದ್ದಾಳೆ; ಪಾತ್ರಗಳನ್ನು ಸರಿಸು ತ್ತಿದ್ದಾಳೆ; ವಸ್ತ್ರಗಳನ್ನು ರಾಶಿ ಹಾಕುತ್ತಿದ್ದಾಳೆ.

ರಾಯರ ಪುತ್ರನು ಏನೋ ಬಾಯಿಗೆ ಹಾಕಿಕೊಂಡು ಹೊರಗೆ ಬಂದನು. "ಗೋಪೂ ನೋಡು....ಒಳಗೆ ಹೋಗಿ ನಿನ್ನ ಅಮ್ಮನ ಹತ್ತರ ಹೇಳು,— ಆಳು ಇನ್ನೂ ಬರಲಿಲ್ಲ ಅಂತ ಕಾಣುತ್ತದೆ; ನೀನೇ ಎಮ್ಮೆ ಹಿಂಡಿ ಚಹ ಮಾಡಿಕೊಡು."

ಪುತ್ರನು ಒಳಗೆ ಹೋಗಿ ತಂದೆಯ ಅಭಿಪ್ರಾಯವನ್ನು ತಾಯಿಗೆ ತನ್ನ ತೊದಲು ನುಡಿಯಲ್ಲಿ ತಿಳಿಸಿದನು.

ಚಹವಿಲ್ಲದೆ ಮಿಡುಕುತ್ತಿದ್ದ ಶ್ರೀಮತಿ ಲಕ್ಷ್ಮೀದೇವಿಯವರು ಕೋಪ ವನ್ನೆಲ್ಲ ಕೇಂದ್ರೀಕರಿಸಿಕೊಂಡು ಹೊರಗೆ ನುಗ್ಗಿಬಂದು "ಅಲ್ಲ, ನನ್ನನ್ನು ನಿಮಗೆ ನನ್ನಪ್ಪ ಐದು ಸಾವಿರ ರೂಪಾಯಿ ಒಟ್ಟಿಗೆ ಕೊಟ್ಟಿದ್ದು ಎಮ್ಮೆ ಹಿಂಡ ಲಿಕ್ಕಲ್ಲ. ತಿಳಿಯಿತೇ ?"

ಚಹವಿಲ್ಲದೆ ಮಿಡುಕುತ್ತಿದ್ದ ಶ್ರೀಮಾನ್ ಲಕ್ಷ್ಮೀಪತಿ ರಾಯರು ತಮ್ಮ ಪತ್ನಿಯ ಮಾತಿನ ಮಳೆಯಲ್ಲಿ ತೊಯ್ದು ಮುದ್ದೆಯಾಗಿ ಮಂಕನಂತೆ ಕುಳಿತು ಬಿಟ್ಟರು. ಚಕಾರ ಮಾತಾಡಲಿಲ್ಲ ಅವರು.

ಆಳು ಬಂದು ಎಮ್ಮೆ ಹಿಂಡಿ, ಚಹಮಾಡಿ, ಇಬ್ಬರೂ ಕುಡಿದು ತಮ್ಮ ನಿತ್ಯದ ಕಾರ್ಯಕಲಾಪಗಳಿಗೆ ತೊಡಗಿದರೇನೋ ನಿಜ. ಆದರೆ ರಾಯರ ತಲೆ ಕಿರಿಕಿರಿ ಉಳಿಯಿತು.

ಸಂಜೆಯ ಮುಂದೆ ಅವರು " ನಾಳೆ ಸಂಜೆ ಬರುತ್ತೇನೆ." ಎಂದು ಹೇಳಿ ಹೊರಟರು.

ಮರುದಿನ ಅವರು ಬರಲು ತುಸು ತಡವಾಯಿತು; ಸಂಜೆಯ ಬದಲು ರಾತ್ರಿಯಾಯಿತು. ಹೊಸ್ತಿಲಿಗೆ ಕಾಲಿಡುವ ಮುಂಚೆ ಲಕ್ಷ್ಮೀದೇವಿಯವರು ತಮ್ಮ ಪತಿಯು ತಡವಾಗಿ ಬಂದ ಬಗ್ಗೆ ಗುಡುಗಿ ಮಿಂಚಿ ಮಾತಿನ ಮಳೆಗರೆದರು.

ರಾಯರು ಚಕಾರ ಮಾತಾಡದೆ ಐದು ಸಾವಿರ ಮುಟ್ಟಿದ ಬಗ್ಗೆ ತಮ್ಮ ಮಾವಂದಿರು—ಅರ್ಥಾತ್ ದೇವಿಯವರ ತಂದೆಯವರು—ಕೊಟ್ಟ ಪಾವತಿಯನ್ನು ತಮ್ಮ ಪತ್ನಿಯ ದೃಷ್ಟಿಗೆ ಹಿಡಿದರು.

ಲಕ್ಷ್ಮೀದೇವಿಯ ಕಣ್ಣು ತುಂಬಿ ಬಂದುವು. ಅವರು-ಅಲ್ಲ ಅವಳು-ನಿಜವಾಗಿ (ಕಂಬನಿ) ಮಳೆಗರೆದಳು.

ಮರುದಿನ ಮುಂಜಾನೆ ರಾಯರು ಎಚ್ಚರಾಗಿ ಕಣ್ಣು ತೆರೆಯುವಾಗ ಲಕ್ಷ್ಮೀದೇವಿ ಕಸ ಹೊಡೆಯುತಿದ್ದಾಳೆ !

---

# ಜೀವನ : ಕಲೆ

ಚೌಕು ರಸ್ತೆಯ ಬದಿಗೆ ನಿಂತು ಹಣ್ಣು ಮುದುಕಿ ಬೇಡುತ್ತಿದ್ದಳು: "ಅಪ್ಪಾ, ಸ್ವಾಮೀ...." ಎಂದು. ಕೈ ಚಾಚಿ ಕರೆಕರೆದು ಬಾಯಿ ಒಣಗಿದರೂ ನೂರೊಸಂಜೆಯೊಳಗೆ ಆರುಕಾಸು ಹುಟ್ಟಲಿಲ್ಲ.

ಮುದುಕಿಯ ದೃಶ್ಯ ಕರುಣಾಜನಕವಾಗಿತ್ತು. ಸಮೀಪದ ಮನೆಯ ಮಹಡಿಯಿಂದ ಒಬ್ಬ ಚಿತ್ರಕಾರ ಅವಳ ಚಿತ್ರ ಬರೆದ. ಬಹಳ ಒಳ್ಳೆಯ ದಾಯಿತು ಚಿತ್ರ.

ಅದೇ ಚೌಕು ರಸ್ತೆಗೆ ಹೊಂದಿದ ನಗರಸಭೆಯಲ್ಲಿ ಏರ್ಪಡಿಸಿದ ಚಿತ್ರಕಲಾ ಪ್ರದರ್ಶನದಲ್ಲಿ, ಆ ಚಿತ್ರಕ್ಕೆ ಮುನ್ನೂರು ರೂಪಾಯಿ ಬಹುಮಾನ ದೊರೆಯಿತು.

ಆ ಮುದುಕಿ ಇನ್ನೂ ಅಲ್ಲೇ ಬಾಯಿಬಿಡುತ್ತಿದ್ದಾಳೆ. ನಿಲ್ಲಲು ಶಕ್ತಿಯಿಲ್ಲದ್ದರಿಂದ ಕುಳಿತು ಕರೆಯುತ್ತಾಳೆ.

ಈಗಿನ ಅವಳ ಚಿತ್ರವನ್ನು ಚೆನ್ನಾಗಿ ಬರೆದರೆ ಬಹುಮಾನ ಎಷ್ಟುಸಿಗಬಹುದೋ !

---

# ಇಬ್ಬರು ಕವಿಗಳು

ಹೊಲದ ಹಸಿರಿನ ಮೇಲೆ ಹೊಂಬಿಸಿಲು ಬಿದ್ದಿತ್ತು. ಅಲ್ಲಲ್ಲಿ ತಿಳಿನೀರಿನ ಕನ್ನಡಿ ಹೊಳೆಯುತ್ತಿತ್ತು. ಒಂದೇ ಒಂದು ಬೆಳ್ಳಗಿನ ಗೂಳಿ ಮೇಯುತ್ತಿತ್ತು. ಇಬ್ಬರು ಕವಿಗಳು ಹೊಲದಂಚಿನ ಬಾಳೆಯ ತೋಟದಲ್ಲಿ ನಿಂತು ಈ ಚೆಲುವನ್ನು ಸವಿಯುತ್ತಿದ್ದರು. ಒಬ್ಬನಿಗೆ ಕಾವ್ಯಸಮಾಧಿ ಹತ್ತಿ ಗುಂಗುಡಹತ್ತಿದನು. ಬಳಿಗೆ ಇನ್ನೊಬ್ಬನಿದ್ದಾನೆಂಬುದನ್ನೂ ಮರೆತನು. ಇನ್ನೊಬ್ಬನಿಗೂ ಒಂದು ಬಗೆಯ ಲಹರಿಬಂತು. ಹೊ ಹೋ ಹೋೕ ಎಂದು ಕೂಗಿಬಿಟ್ಟ. ಅವನು ಸಮಾಧಿಯಿಳಿದು ಇವನನ್ನು ಕೇಳಿದ: ಏನಪ್ಪಾ ನನ್ನ ಸಮಾಧಿಯನ್ನೆಲ್ಲ ಕೆಡಿಸಿಬಿಟ್ಟೆ. ಈ ಚೆಲುವಿನ ದಿವ್ಯಸ್ಪರ್ಶಹೊಂದಿ ನನ್ನ ಜೀವಾತ್ಮನು ಪರಮಾತ್ಮನ ಕಡೆಗೆ ಹರಿದು ಚಿತ್ ಸುಖಸಾಗರದಲ್ಲಿ ಈಜಾಡುತ್ತಿದ್ದನು. ಕೆಡಿಸಿಬಿಟ್ಟೆಯಲ್ಲ.

ಇವನು ಹೇಳಿದ: ಓಹೋ, ಹಾಗೆಲ್ಲ ಆಗಿಬಿಟ್ಟಿತ್ತೋ ? ನನಗೂ ಒಂದು ಬಗೆಯ ಸಮಾಧಿ ಹತ್ತಿತ್ತು. ಅಲ್ಲಿ ಒಂದು ಸೊಕ್ಕಿನ ಗೂಳಿ ಒಕ್ಕಲಿಗರ ಗಂಜಿಯ ಬೊಡ್ಡೆಗಳನ್ನೆಲ್ಲ ತೂರಿಕೊಂಡು ಹೋಗುವುದನ್ನು ಕಂಡೆ; ಕೂಗಿಬಿಟ್ಟೆ.

ಇವನ ಹೊ ಹೋ ಹೋೕ ಕೇಳಿಯೋ ಏನೊ, ತೋಟದಲ್ಲಿದ್ದ ಒಬ್ಬ ಒಕ್ಕಲಿಗನು ಗದ್ದೆಯನ್ನೆಲ್ಲ ಸೂರೆಗೊಳ್ಳುತ್ತಿದ್ದ ಗೂಳಿಯನ್ನು ತೌರಿಕೊಂಡು ಹೋದುದು ವಾಗ್ವಾದಕ್ಕೆ ಆರಂಭಿಸಿದ್ದ ಆ ಕವಿಗಳಿಗೆ ಕಾಣಿಸಲಿಲ್ಲ.



# ಹಾಲು : ನೀರು

ನಾಲ್ಕು ಮನೆಗಳ ಸಮೀಪದಲ್ಲಿ ಒಬ್ಬ ಗವಳಿಯ ಗುಡಿಸಲು. ಅಂಗಳದಲ್ಲಿ ಆವನು ಹಾಲು ಹಿಂಡುತ್ತಿದ್ದ. ಒಳಗೆ ಅವನ ಹೆಂಡತಿ ಬೆಂಕಿಮಾಡುತ್ತಿದ್ದಳು. ಹೇಗೋ ಆಗಿ ಆಳೆತ್ತರದ ಆ ಗುಡಿಸಲಿಗೆ ಬೆಂಕಿ ಬಿತ್ತು. ಗಂಡ ಹೆಂಡರಿಬ್ಬರೂ ಬೊಬ್ಬಿಟ್ಟರು. ನೆರೆಯವರೆಲ್ಲ ಸೇರಿ "ನೀರು ತನ್ನಿ ಬೆಂಕಿ ಬಿದ್ದಿದೆ" ಎಂದು ಗೊಂದಲ ಎಬ್ಬಿಸಿದರು. ಎಲ್ಲರ ಬಾಯಿಂದಲೂ "ಪಾಪ! ಬಡವನ ಗುಡಿಸಲು ಬೂದಿಯಾಯಿತು" ಎಂಬ ಉದ್ಗಾರ ಹೊರಟಿತು.

ಮಣ್ಣು ಎರಚಿದ ಮೇಲೆ ಬೆಂಕಿ ಶಾಂತವಾಯಿತು. ಆಪರೂ ಗವಳಿಯು ಹಾಲಿನ ಕೊಡಗಳನ್ನು ತಂದು ಬೆಂಕಿಗೆ ಸುರುವಿದ. "ಉರಿಯುವದು ನಿಂತಿತು. ಇನ್ನೇಕೆ ಹಾಲು ಸುರಿದು ಹಾಳುಮಾಡುತ್ತೀಯೋ ?" ಎಂದು ಕೇಳಿದರು ನೆರೆದವರು. "ನನ್ನ ಗುಡಿಸಲಂತೂ ಸುಟ್ಟು ಹೋಯಿತು. ಕಿಡಿಹಾರಿ ನಿಮ್ಮ ಮನೆಗಳಿಗೆ ತಾಗಬಾರದು ಅಣ್ಣಾ" ಅಂದ ಗವಳಿ.

ನಳದ ಬಳಿ ಕಚ್ಚಾಡಿ ಮನೆಯಲ್ಲಿ ನೀರು ತುಂಬಿಕೊಂಡು, ಬೆಂಕಿ ಆರಿಸಲು ಒಂದು ತಂಬಿಗೆ ನೀರನ್ನೂ ತರದ ಅವರಲ್ಲಿ ಅನೇಕರಿಗೆ ನಾಚಿಕೆಯಿಂದ ಮೊಗ ಇಷ್ಟು ಸಣ್ಣದಾಯಿತು.

---

# ಜೋಡಿನ ಅಳತೆ*

ನಮ್ಮೂರಲ್ಲಿ ಬೊದ್ದನೆಂಬ ಒಬ್ಬ ಪಂಡಿತನಿದ್ದನು. ಅವನಿಗೆ ಒಮ್ಮೆ ಜೋಡು ಮಾಡಿಸಿಕೊಳ್ಳಬೇಕೆನಿಸಿತು. ಕೂಡಲೇ ತನ್ನ ಕಾಲಿನ ಅಳತೆಯನ್ನು ಬರೆದುಕೊಂಡು ಪೇಟೆಗೆ ಹೊರಟನು.

ಅಂಗಡಿಗೆ ಹೋದಮೇಲೆ ಅವನಿಗೆ ತಾನು ಏನೋ ಮರೆತು ಬಿಟ್ಟು ಬಂದಂತೆ ಅನಿಸಿತು. "ಸ್ವಲ್ಪ ತಡೆಯಿರಿ, ಈಗಲೇ ಬಂದೆ" ಎಂದು ಹೊರ ಬಿದ್ದ.

"ಯಾಕೆ ? ಹಣತರಲು ಮರೆತಿದ್ದರೆ, ಅಡ್ಡಿಯಿಲ್ಲ; ನಾಳೆ ಕೊಡ ಬಹುದು" ಅಂದನು ಅಂಗಡಿಯ ಯಜಮಾನ.

"ಹಣ ಇದೆ. ಆದರೆ ಈಗಲೇ ಬಂದೆ...." ಎಂದು ನಡೆದೇಬಿಟ್ಟ ಪಂಡಿತ.

ಹತ್ತು ಹದಿನೈದು ನಿಮಿಷಗಳಲ್ಲಿ ಅವನು ಒಂದು ಕಾಗದವನ್ನು ತಂದು "ಜೋಡಿನ ಅಳತೆಯನ್ನು ಮನೆಯಲ್ಲೇ ಮರೆತು ಬಿಟ್ಟಿದ್ದೆ" ಅಂದ.

"ಜೋಡು ನಿಮ್ಮ ಮನೆಯವರಿಗೇ ? "

"ಅಲ್ಲ. ನನಗೇ."

---

* ಒಂದು ಚೀನಾ ಕತೆ

# ಎಂಜಲುಬೋರೆ

ಶ್ರೀ ರಾಮಚಂದ್ರ ದೇವರು ಶಬರಿಯು ಕೊಟ್ಟ ಎಂಜಲು ಬೋರೆಯನ್ನು ತಿಂದ ಸುದ್ದಿಯು ಆ ಅರಣ್ಯ ಪ್ರದೇಶದಲ್ಲಿ ಕಾಳ್ಗಿಚ್ಚಿನಂತೆ ಹಬ್ಬಿತು. ಕೇಳುವವೇನು ? ಬುಟ್ಟಿ ತುಂಬ ಎಂಜಲು ಬೋರೆಯನ್ನು ಹೊತ್ತು ಬೇಡತಿಯರ ಹಿಂಡೇ ಅವರ ಪರ್ಣಶಾಲೆಗೆ ಬಂದು ಆ ಹಣ್ಣನ್ನು ತಿನ್ನಲು ಪ್ರಾರ್ಥಿಸಿಕೊಂಡಿತು. " ಶಬರಿಯು ಕೊಟ್ಟದ್ದನ್ನು ಮಾತ್ರ ತಿನ್ನಬೇಕೇ ? ನಾವೇನು ಪಾಪಿಗಳೇ ? " ಎಂದು ಕೈಜೋಡಿಸಿ ಬೇಡಿಕೊಂಡಧು. ರಾಮಚಂದ್ರನಿಗೆ ಏನು ಮಾಡಬೇಕೆಂಬುದೇ ತಿಳಿಯಲಿಲ್ಲ. ಹೇಗಾದರೂ ಅವರನ್ನು ಕಳಿಸುವ ಯತ್ನ ಮಾಡಿದನು.

ಆದರೆ ಬೇಡತಿಯರು ಬಿಡುತ್ತಾರೆಯೇ ? " ನೀವು ನಮ್ಮ ಕಾಣಿಕೆಯನ್ನು ಸ್ವೀಕರಿಸದಿದ್ದರೆ ಇಲ್ಲೇ ಸಾಲು ಹಿಡಿದು ಕುಳಿತು ನಿಮ್ಮ ಹೆಸರನ್ನು ಭಜಿಸುತ್ತ ಕಾಲಕಳೆಯುವೆವು " ಎಂದರು.

ಬೋರೆಗಳನ್ನು ಪರ್ಣಶಾಲೆಯೊಳಗೆ ಇಟ್ಟು ಹೋಗುವಂತೆ ಸೀತಾಪತಿಯು ಸೂಚಿಸಿದನು.

ಒಬ್ಬೊಬ್ಬರ ಬುಟ್ಟಿಯಿಂದ ಒಂದೊಂದು ಬೋರೆಯನ್ನಾದರೂ ತಿನ್ನಲೇಬೇಕೆಂದು ಬೇಡತಿಯರು ಹಟ ಹಿಡಿದರು.

ಅವರ ಸತ್ಯಾಗ್ರಹಕ್ಕೆ ಸೋತು ದಶರಥ ತನಯನು ಒಂದೊಂದು ಬುಟ್ಟಿಯಿಂದ ಒಂದೊಂದು ಬೋರೆಯನ್ನು ತಿನ್ನಹತ್ತಿದನು.

ಅದನ್ನು ಕಂಡು ಸೀತಾದೇವಿಯು " ಬೇಡ " ಅಂದಳು. ಲಕ್ಷ್ಮಣನೂ ಅದೇ ಅಭಿಪ್ರಾಯ ವ್ಯಕ್ತಪಡಿಸಿದನು. ಆದರೆ ಭಕ್ತವತ್ಸಲನಾದ ರಾಮಚಂದ್ರನು ಕೇಳಲಿಲ್ಲ. ಎಲ್ಲ ಬುಟ್ಟಿಗಳಿಂದಲೂ ಒಂದೊಂದು ಎಂಜಲು ಬೋರೆಯನ್ನು ತಿಂದನು.

ಸಂಜೆಯಹೊತ್ತಿಗೆ ಶ್ರೀ ರಘುಪತಿಯ ಮುಖಕಮಲವು ತುರಿಸಹತ್ತಿತು.

" ನಾವು ಹೇಳಲಿಲ್ಲವೇ ? " ಎಂದು ಸೀತಾದೇವಿಯು ಕೇಳಿದಳು.

" ಅವುಗಳನ್ನು ತಿಂದುದರಿಂದಲೇ ಹೀಗೆ ತುರಿಸುತ್ತಿದೆಯೆಂದು ನಿಮ್ಮ ಅಭಿಪ್ರಾಯವೇ ? ಛೆ ! ಆತ್ಮಾರ್ಪಣೆಯ ಭಾವದಿಂದ ನಿರ್ಮಲ ಹೃದಯದ ಬೇಡತಿಯರು ಕೊಟ್ಟ ಹಣ್ಣಿನಿಂದ ಇಂಥ ಅನಿಷ್ಟವಾಗಲು ಸಾಧ್ಯವೇ ಇಲ್ಲ " ಎಂದನು ಜಾನಕೀ ವಲ್ಲಭನು.

ಮರುದಿನ ಆತನ ತುಟಿಗಳು ಬಾತು ಅವುಗಳಲ್ಲಿ ಬೊಕ್ಕೆಗಳು ಕಂಡು ಕೊಂಡವು.

ಗಿಡಮೂಲಿಕೆಯೊಂದನ್ನು ಅರೆಯುತ್ತ ಲಕ್ಷ್ಮಣನು ಹೇಳಿದನು "ಬೇಡತಿಯರ ಹೃದಯ ಎಷ್ಟೇ ನಿರ್ಮಲವಿದ್ದರೂ ಅವರ ಎಂಜಲು ಬೋರೆಯು ಮಾತ್ರ....ಅಂಟುರೋಗವು ಹೃದಯ ನೈರ್ಮಲ್ಯಕ್ಕೆ ಹೆದರುತ್ತದೆಯೇ ? ಭಾವನೆಯ ಜತೆಗೆ ಬುದ್ಧಿಯನ್ನೂ.... "

ಸೀತಾಮಾತೆಯು ಈ ಪಾಠವನ್ನು ತನ್ನ ಪತಿದೇವನಿಗೆ ಇರುಳಿನಲ್ಲಿ ' ಕಾಂತಾ ಸಮ್ಮಿತತಯಾ ' ತಿಳಿಸಿ ಹೇಳಿದಳು. ಅಂದಿನಿಂದ ಶ್ರೀ ರಾಮಚಂದ್ರ ದೇವರು ಭಕ್ತರ ಎಂಜಲು ಗಿಂಜಲು ತಿನ್ನಲಿಲ್ಲ.



# 'ಹಾ ಸೀತೇ! ಓ ಲಕ್ಷ್ಮಣಾ!'

"ಹಾ ಸೀತೇ ! ಓ ಲಕ್ಷ್ಮಣಾ !" ಎಂದು ಮಾರೀಚ ಪ್ರಾಣಬಿಟ್ಟ. ಅದನ್ನು ಕೇಳಿ ಸೀತೆಯ ಜೀವ ಥರ ಥರ ನಡುಗಿತು. ಲಕ್ಷ್ಮಣನಿಗೆ "ಓಡು ರಾಕ್ಷಸನ ವಶವಾಗಿರುವ ನಿನ್ನ ಅಣ್ಣನನ್ನು ಉಳಿಸು" ಎಂದು ಒತ್ತಾಯಪಡಿಸಿದಳು. ಲಕ್ಷ್ಮಣ ಕದಲಲಿಲ್ಲ. ಮತ್ತೆ ಒತ್ತಾಯ ಮಾಡಿದಳು. "ಇದು ರಾಕ್ಷಸರ ಮೋಸ; ರಾಮಚಂದ್ರಣ್ಣ ಅಜೇಯ" ಎಂದು ಲಕ್ಷ್ಮಣ ನುಡಿದುದಕ್ಕೆ "ನೀನು ನನ್ನ ಮೇಲಿನ ಆಶೆಯಿಂದ ಹೋಗುವದಿಲ್ಲ ಅಲ್ಲವೇ ?" ಎಂಬ ಕಣ್ಣೀರ ಕೊಂಕು ಮಾತು ಪತಿವ್ರತಾ ಶಿರೋಮಣಿ ಸೀತಾಮಾತೆಯಿಂದ ಬಂದಿತು.

ತಾಯಿಯಂತೆ ಸೇವಿಸುತ್ತ ಬಂದ ಅತ್ತಿಗೆಗೆ ತನ್ನಲ್ಲಿ ಇಂಥ ಸಂಶಯವೇ ಎಂದು ಲಕ್ಷ್ಮಣ ನೊಂದುಕೊಂಡ. ಅವಳಿಗೆ ಏನೆಲ್ಲ ತಿಳಿಹೇಳಿದ. ಪಾತಿವ್ರತ್ಯದ ಝಳಕಿನಿಂದ ಮಂಕಾದ ಅವಳ ಬುದ್ಧಿಗೆ ಅವನ ಮಾತೊಂದೂ ಸರಿಯೆನಿಸಲಿಲ್ಲ. ಅಂತೂ ಲಕ್ಷ್ಮಣ ಗೆರೆ ಎಳೆದು ಹೊರಟ. ಕದಡಿದ ಮನಸ್ಸಿನಿಂದ ಹೊರಟ ಅವನ ಬಾಯಿಂದ ಈ ಮಾತುಗಳು ಜಾರಿದವು "ಹೆಂಗಸರ ಬುದ್ಧಿ ಮೊಳಕಾಲ ಕೆಳಗೆ. ಹೆಂಗಸರ ಮಾತು ಕೇಳುವ ಗಂಡಸರ ಬುದ್ಧಿ ಅಂಗಾಲ ಕೆಳಗೆ. ಹೆಣ್ಣನ್ನು ಪೂಜಿಸುವದು ಅವಳನ್ನು ಕಾಮಿಸುವಷ್ಟೇ ಕೆಡಕು. ಮಂಕು....ಮಂಕು....ಮಂಕು....ಏನೆಲ್ಲ ಆಗಲಿದೆಯೋ ಈ ಮಹಾಶಯಳ ಮೃಗಚರ್ಮದ ಮೋಹದ ದೆಸೆಯಿಂದ !"

---

# ರಾವಣನ ವೇದಾಂತ

ಮಾಸ್ಕೋಕ್ಕೆ ರಾಯಭಾರಿಯಾಗಿ ಹೊರಟ ಸರ್ ರಾಧಾಕೃಷ್ಣನಂತೆ ಆಂಜನೇಯನು ಲಂಕೆಗೆ ಹಾರಿದನು. ರಾವಣೇಶ್ವರನು ಅವನನ್ನು ಗೌರವದಿಂದ ಸ್ವಾಗತಿಸಿ ಸತ್ಕರಿಸಿದನು. ಮಾರುತಿಯು ದಶಕಂಠನ ಮುಂದೆ ತನ್ನ ಬಾಲದ ಸುರಳಿಯ ಮೇಲೆ ಕುಳಿತು ಅವನಿಗೆ ಆದರ್ಶ ಜೀವನದ ತತ್ವಗಳನ್ನು ತಿಳಿಸಿ ಹೇಳಿದನು. ಮಾನವ ಕುಲವು ಒಂದೇ ಆಗಿದೆ; ಪರಮಾತ್ಮನ ಸಂಕಲ್ಪದಿಂದ ಹುಟ್ಟಿದ ಈ ಪ್ರಪಂಚದಲ್ಲಿ ಜೀವಾತ್ಮ ಜೀವಾತ್ಮರಲ್ಲಿ ಭೇದವೆಣಿಸಕೂಡದು; ಶುದ್ಧ ಹೃದಯದಿಂದ ಸದ್ಧರ್ಮವನ್ನಾಚರಿಸಿ ಆತ್ಮದ ಉದ್ಧಾರ ಮಾಡಿಕೊಳ್ಳಲು ಈ ಆಯುಷ್ಯವು ಒಂದು ಸಂದರ್ಭ ಮಾತ್ರ; ಸರಿಯಾಗಿ ತಿಳಿದು ನೋಡಿದರೆ ಈ ಜಗತ್ತು ಮಾಯೆಯೇ ಆಗಿದೆ; ಆದರೆ "ಸತ್ಯಂ ಶಿವಂ ಸುಂದರಂ" ಈ ತಿರುಳನ್ನರಿತು ನೀನು ಸೀತಾಮಾತೆಯನ್ನು ಶ್ರೀ ರಾಮಚಂದ್ರದೇವರಿಗೆ ತಿರುಗಿ ಒಯ್ದುಕೊಟ್ಟು ಮುಕ್ತಿಯನ್ನು ಪಡೆಯುವಂಥವನಾಗು.

ಈ ಪ್ರವಚನವನ್ನು ಕೇಳಿ ರಾವಣನು ಹತ್ತು ಮುಖಗಳಿಂದ ದಿಗ್ಗಜಗಳು ನುಗ್ಗಾಗುವಂತೆ ಗಹಗಹಿಸಿದನು. ಅನಿರೀಕ್ಷಿತ ಆ ಅಟ್ಟಹಾಸಕ್ಕೆ ಮಾರುತಿಯು ಮಂಕು ಬಡಿದುಹೋದನು. ದಶಮುಖಗಳಿಂದ ಈ ಮಾತು ಹೊರಟವು.

"ಮಾನವ ಕುಲವು ಒಂದೇ ಎಂದು ನಂಬಿ ಜೀವಾತ್ಮರಲ್ಲಿ ಭೇದವೆಣಿಸದೆ ಶುದ್ಧ ಹೃದಯದಿಂದಲೇ ಸೀತೆಯನ್ನು ತಂದಿದ್ದೇನೆ. ಮಂಡೋದರಿಯ ಆತ್ಮವನ್ನೂ ಸೀತೆಯ ಆತ್ಮವನ್ನೂ ಒಂದೇ ರೀತಿಯಿಂದ ಕಾಣುತ್ತೇನೆ. ಈ ಜಗತ್ತೇ ಮಾಯೆಯಾಗಿರಲು, ನಾನು ರಾಮನ ಮಡದಿಯನ್ನು ತಂದುದಕ್ಕಾಗಿ ಆತನು ವಿಷಾದಿಸಬೇಕಾಗಿಲ್ಲ. ಈ ಘಟನೆಯೂ ಒಂದು ಮಾಯೆ, ಪರಮಾತ್ಮನ ಸಂಕಲ್ಪ ಎಂದು ತಿಳಿದು ಸುಖವಾಗಿರಲು ಹೇಳು

ನಿನ್ನೊಡೆಯನಿಗೆ. ನನ್ನಾತ್ಮವೂ ಅವನಾತ್ಮವೂ ಒಂದೇ ಎಂಬುದನ್ನು ನಾನು ಬಲ್ಲೆ. ಸುಂದರವಾದುದನ್ನು ಆರಾಧಿಸುವುದೇ ಸತ್ಯದ ಸಾಕ್ಷಾತ್ಕಾರದ ಮಾರ್ಗ. ಅದರಿಂದಲೇ ಶಿವನ ಸಾನ್ನಿಧ್ಯ ಸಾಧ್ಯ—ಇವೆಲ್ಲವೂ ನನಗೆ ವಿದಿತವೇ ಇದೆ. ಕಾರಣ ನೀನು ನೇರವಾಗಿ ಮರಳಿ ರಾಮಚಂದ್ರನಿಗೆ ಇವುಗಳನ್ನೆಲ್ಲ ವಿವರಿಸಿ ಶುದ್ಧ ಹೃದಯದಿಂದ ಸದ್ಧರ್ಮವನ್ನಾಚರಿಸಿ ಆತ್ಮವನ್ನು ಉದ್ಧಾರ ಮಾಡಿ ಕೊಳ್ಳಲು ಹೇಳು."

ಚಕಾರ ಮಾರ್ ನುಡಿಯದೆ ಮಾರುತಿಯು ಮರಳಿ ಬಂದನು.

ಮರುದಿನವೇ ಲಂಕೆಗೆ ಸೇತು ಕಟ್ಟಲು ಸುರುವಾಯಿತು.



# ರಾಮರಾಜ್ಯ

ಶ್ರೀ. ರಾಮಚಂದ್ರ ದೇವರು ವನವಾಸವನ್ನು ಮುಗಿಸಿ ಅಯೋಧ್ಯೆಗೆ ಬಂದು ಸಿಂಹಾಸನಾರೂಢನಾಗಿ ರಾಜ್ಯವಾಳುವುದಕ್ಕೆ ಸುರುಮಾಡಿದನು.

ಅಧಿಕಾರ ಸೂತ್ರವು ತನ್ನ ಕೈಗೆ ಬಂದೊಡನೆಯೇ ಸೀತಾಪತಿಯು ತನ್ನೊಡನೆ ಅರಣ್ಯಲ್ಲಿ ದುರ್ದಿನಗಳನ್ನು ಕಳೆದ, ಲಂಕೆಯನ್ನು ಸುಟ್ಟು ತನ್ನ ಧರ್ಮಪತ್ನಿಯನ್ನು ಬಿಡಿಸಿಕೊಂಡುಬಂದ ಕಪಿಕುಲವನ್ನು ಕರೆದು ಒಂದೊಂದು ಮಂಗನನ್ನು ಒಂದೊಂದು ಹುದ್ದೆಯ ಮೇಲೆ ನೇಮಿಸಿದನು. ಭಕ್ತಶಿಖಾಮಣಿಯಾದ ಹನುಮಂತನಂತೂ ಗಿಡದ ತುತ್ತ ತುದಿಗೆ ಕುಳಿತು ಟುರ್ ಎಂದು ಹುಕುಂ ಬಜಾಯಿಸಹತ್ತಿದನು. ಅವನಿಗೆ 'ಸರ್ವ ಭಾಷಾ ಕೋವಿದ' ಎಂಬ ಬಿರುದು ಸಿಕ್ಕಿತು !

ಅಯೋಧ್ಯೆಯ ಸಭ್ಯ ಪ್ರಜೆಗಳು ಯಾವದಾದರೊಂದು ಕೆಲಸಕ್ಕೆ ಅರ್ಜಿ ಮಾಡಿದರೆ ಶ್ರೀರಘುಕುಲತಿಲಕನೇ ಮುಂದೆ ಬಂದು "ನೀವು ನನ್ನೊಡನೆ ವನವಾಸ ಎಷ್ಟು ದಿನ ಮಾಡಿದ್ದಿರಿ ? ಲಂಕೆಯ ಎಷ್ಟು ಮನೆಗಳನ್ನು ಸುಟ್ಟ ವೀರರು ನೀವು ?" ಎಂದು ಪ್ರಶ್ನಿಸುತ್ತಿದ್ದನು. ಈಗಿನ ಕಾಲದಂತೆ ಜಾತಿ ವಯಸ್ಸು ಮುಂತಾದವುಗಳನ್ನು ಕೇಳುವ ಪದ್ಧತಿ ಆಗ ಚಾಲೂ ಇತ್ತಿಲ್ಲ.

ಇದನ್ನೆಲ್ಲ ಕಂಡು ಲಕ್ಷ್ಮಣನು ಒಂದು ದಿನ ಅಣ್ಣನಲ್ಲಿ ಸವಿನಯ ವಿಜ್ಞಾಪನೆ ಮಾಡಿದನು: ರಾಜ್ಯವಾಳುವುದಕ್ಕೂ ನಮ್ಮೊಡನೆ ವನವಾಸ ಲಂಕಾದಹನಗಳನ್ನು ಮಾಡಿದ್ದಕ್ಕೂ ಏನೂ ಸಂಬಧವಿಲ್ಲ. ಲಂಕಾದಹನಕ್ಕೆ ರಾಜ್ಯದ ಕಾರಭಾರ ನಡೆಸುವ ಜಾಣ್ಮೆ ಬೇಕಾಗಿದ್ದಿಲ್ಲ.

ಅದಕ್ಕೆ ಪತಿಪಾವನನು "ತಮ್ಮಾ ನೀನಂದದ್ದು ನಿಜ. ಆದರೆ ನಮ್ಮೊಡನೆ ಅಡವಿಯಲ್ಲಿ ಬಳಲಿ, ಲಂಕಾದಹನದಂಥ ಶೌರ್ಯ ಕಾರ್ಯವೆಸಗಿದ ಈ ಕಪಿಗಳಿಗೆ ದೊಡ್ಡ ದೊಡ್ಡ ಅಧಿಕಾರ ಕೊಡುವದು ನಮ್ಮ ಕರ್ತವ್ಯವಲ್ಲವೇ ?"

ಲಕ್ಷಣನು ಕೂಡಲೇ "ಅಣ್ಣಾ ನಮ್ಮೊಡನೆ ಕಾಡಿನಲ್ಲಿ ಬಳಲಿ, ಲಂಕೆಯನ್ನು ಸುಟ್ಟು ಹೈರಾಣಾದ ಈ ಭಕ್ತಶಿಖಾಮಣಿಗಳನ್ನು ದೊಡ್ಡ ದೊಡ್ಡ ಅಧಿ

ಕಾರಗಳಲ್ಲಿಟ್ಟು ದುಡಿಸುವದು ನ್ಯಾಯವಲ್ಲ. ಹಿಂದೆ ಮಾಡಿದ ಸಾಹಸ ತ್ಯಾಗ ಗಳಿಗಾಗಿ ಇವರನ್ನು ಒಂದು ಉಪವನದಲ್ಲಿ ಸುಖವಾಗಿ ಇಡುವದು ನಮಗೆ ಒಪ್ಪುವ ವಿಷಯ. ದಣಿದು ಸಣ್ಣಾದ ಇವರನ್ನು ಮತ್ತೆ ದುಡಿಸಹತ್ತುವದು ತರವೇ ?" ಅಂದನು.

ಜಾನಕಿ ಜೀವನನ ತಲೆಯಲ್ಲಿ ಹೊಸ ಬೆಳಕು ಬಿದ್ದಿತು. ಮರುದಿನವೇ ಅವನು ಕಪಿಗಳನ್ನೆಲ್ಲ ಕರೆದು ಅವರಿಗಾಗಿ ತಯಾರಿಸಿದ ಒಂದು ' ಸ್ಪೇಶಲ್ ' ಉಪವನದಲ್ಲಿ ಅವರಿಗೆ ' ಪೆನ್ಶನ್ ' ಅನುಗ್ರಹಿಸಿದನು.

ಅಂದಿನಿಂದ ದೊಡ್ಡ ಸಣ್ಣ ಕೆಲಸಗಳಿಗೆಲ್ಲ ಅಯೋಧ್ಯೆಯ ಪ್ರಜೆಗಳೇ ಬಂದರು; ಆ ರಾಜ್ಯವು ರಾಮರಾಜ್ಯವೆಂದು ಪ್ರಸಿದ್ಧಿಪಡೆಯಿತು.

# ಅನುಭವಾಮೃತ

ಹೆಂಗಸರು ಎಷ್ಟೇ ಒಳ್ಳೆಯವರಿದ್ದರೂ ಕೆಲವು ವಿಷಯಗಳು ನಾಲಿಗೆಯ ಮೇಲೆ ನಲಿಯತೊಡಗಿದವೆಂದರೆ ಕೊಂಚ ಮಟ್ಟಿಗಾದರೂ ಅವರು ಚಂಡಿ–ಚಾಮುಂಡಿಯರಾಗುತ್ತಾರೆ.

ಪಂಚಕನ್ಯೆಯರಲ್ಲಿ ಒಬ್ಬಳೆಂದು ಖ್ಯಾತಿಪಡೆದ ಸೀತಾದೇವಿಗೂ ಯಾವ ಕವಿಯಿಂದಲೂ ಹೊಗಳಿಸಿಕೊಳ್ಳದ ( ಲಕ್ಷ್ಮಣನ ಮಡದಿ ) ಊರ್ಮಿಳೆಗೂ ಹೇಗೋ ಮಾತಿಗೆ ಮಾತು ಹತ್ತಿತು. ಗಂಡಸರೆಲ್ಲ ಬೇಟೆಗೆ ಹೋದ ಸಮಯವಾಗಿತ್ತು.

" ಹದಿನಾಲ್ಕು ವರ್ಷ ನಿಮ್ಮ ಸೇವೆಗೆಂದು ನಿಮ್ಮ ಜತೆಗೆ ಅಡವಿಗೆ ಕಳುಹಿಸಿದ ನನ್ನ ಪತಿಯಿಂದ ಅಗಲಿ ನವೆದದ್ದು ಇಷ್ಟೆಲ್ಲ ಅನ್ನಿಸಿಕೊಳ್ಳಲಿಕ್ಕಾಯಿತೇ ಅಕ್ಕಾ ?"

" ನಮ್ಮ ಸೇವೆಗಾಗಿ ನಿನ್ನ ಪತಿಯನ್ನು ಕಳುಹಿಸಿದೆಯಾ ? ವ್ಹ ! ನನ್ನ ಹಾಗೇ ಹಟ ಹಿಡಿದಿದ್ದರೆ ನೀನೂ ಗಂಡನ ಜತೆಗೇ ಬರುತ್ತಿದ್ದಿಯಲ್ಲ. ನಾವೇ ನಿಮ್ಮ ಸೇವೆ ಮಾಡುತ್ತಿದ್ದೆವು. "

" ಪತಿಯು ಬೇಡವೆಂದರೂ ಕೇಳದೆ ಅವನ ಬೆನ್ನು ಹತ್ತುವ ಹಟಗಾರ್ತಿ ನಾನಲ್ಲ ಅಕ್ಕಾ. "

" ನಾನು .ಹಟಗಾರ್ತಿಯೆಂದು ನಿನ್ನ ಅಭಿಪ್ರಾಯವೋ ? ! ಒಂದಲ್ಲ ಎರಡಲ್ಲ, ಹದಿನಾಲ್ಕು ವರ್ಷ ನಮ್ಮಿಂದ ದೂರ ಉಳಿಯುವ ಸಂದರ್ಭದಲ್ಲಿ ಗಂಡಸರು ಏನೆಲ್ಲ ಕಾರಭಾರ ಮಾಡಿಯಾರೆಂಬ ಕಲ್ಪನೆ ನಿನಗಿದ್ದರೆ ನೀನೂ ಹಟಮಾರಿಯಾಗುತ್ತಿದ್ದಿ ! ಪಾಪ, ಎಲ್ಲ ಹಲ್ಲೂ ಇನ್ನೂ ಸರಿಯಾಗಿ ಮೊಳೆತಿರದ ನಿನಗೆ ಇದೆಲ್ಲ ಹೇಗೆ ತಿಳಿಯಬೇಕು ? ಶೂರ್ಪನಖಿಯ ಬದಲು ಇನ್ನಾವ ಕಾನ್ ಚೆಲುವೆಯಾದರೂ ನಿನ್ನ ಪತಿಗೆ ಗಂಟು ಬಿದ್ದಿದ್ದರೆ ನಿನ್ನ ಫಜೀತಿಯಾಗುತ್ತಿತ್ತು "

" ನನ್ನ ಪತಿಯಲ್ಲಿ ನನಗೆ ಪೂರ್ಣ ವಿಶ್ವಾಸವಿದೆ "

" ಎಲ್ಲರಿಗೂ ಹಾಗೇ. ಆದರೆ ಗಂಡಸಿನ ಒಲವು ಸ್ವಾಭಾವಿಕವಾಗಿ ಬಹುಪತ್ನೀತ್ವದ ಕಡೆಗೆ ಎಂಬುದು ನಿನಗೆಲ್ಲಿ ತಿಳಿಯಬೇಕು ? ನಿಜವಾದ ಪತಿವ್ರತೆಯು ಇಂಥ ಸೂಕ್ಷ್ಮಗಳನ್ನೆಲ್ಲ ತಿಳಕೊಂಡು ವರ್ತಿಸಬೇಕು. ಸುಮ್ಮನೆ ಬೆಪ್ಪುತಕಡಿಯಂತೆ ಕುಳಿತು ಗಂಡ ಅಂದುದಕ್ಕೆಲ್ಲ ಹುಂಗುಟ್ಟಿದರಾಗಲಿಲ್ಲ. ದಾಂಪತ್ಯಕ್ಕೆ ಎಳ್ಳಷ್ಟು ಅಡೆ-ತಡೆ ಬರುತ್ತದೆಂದು ಕಂಡುಬಂದರೆ ಪತಿಯ ಮನಸ್ಸಿನ ವಿರುದ್ಧ ನಡೆದಾದರೂ ಇಬ್ಬರ ಒಳಿತನ್ನು ಸಾಧಿಸಬೇಕು. ತನ್ನ ಪತಿಯು ಜಗದ್ವಂದ್ಯನೇ ಇದ್ದರೂ ಇಂಥ ಸಂದರ್ಭದಲ್ಲಿ ಪತಿವ್ರತಾ ಶಿರೋಮಣಿಯಾದವಳು ಹಿಂಜರಿಯಬೇಕಾಗಿಲ್ಲ. ಗಂಡಸಿನ ಬುದ್ಧಿಗೆ ನಿಲುಕದ ಎಷ್ಟೋ ವಿಷಯಗಳು ಹೆಂಗಸಿನ ಹೃದಯಕ್ಕೆ ಗೋಚರವಾಗುವದುಂಟು...."

ಅಕ್ಕನ ಅನುಭವಾಮೃತದಿಂದ ಪುನೀತಳಾದ ಊರ್ಮಿಳೆಯು ' ನಾನು ಅಂದುದಕ್ಕೆ ಕ್ಷಮಿಸವ್ವಾ ' ಎಂದು ಸಾಷ್ಟಾಂಗ ಪ್ರಣಾಮಗೈದಳು.

" ಶ್ರೀರಾಮ ಪತ್ನಿಯ ನುಡಿಯಲ್ಲಿ ಕುಂದಿಲ್ಲವೆಂಬುದನ್ನು ನಂಬಿರು ' ಅಂದಳು ಸೀತಾದೇವಿ.

# ಗುಪ್ತಚಾರ

ರಾಮಚಂದ್ರದೇವರ ಆಳಿಕೆಯಲ್ಲಿ ಗುಪ್ತಚಾರ ದಲವು ಭದ್ರ ವಾಗಿತ್ತೆಂದು ಸೀತಾ ಪರಿತ್ಯಾಗದ ಕಾರಣದಿಂದ ಗೊತ್ತಾಗುತ್ತದೆ.

ಒಂದಿರುಳು ಒಬ್ಬ ಗುಪ್ತಚಾರನು ಒಂದು ಬೀದಿಯಲ್ಲಿ ನಡೆದಿದ್ದನು. ನಿಸರ್ಗದ ಕರೆಗೆ ಓಗೊಡಲು ಹೊರಗೆ ಬಂದಿದ್ದ ಒಬ್ಬ ನನ್ನಂಥ ಸಭ್ಯಗೃಹ ಸ್ಥನು ಅವನನ್ನು ಕಂಡು " ಯಾರದು ?" ಎಂದು ಕೇಳಿದನು. ರಾಮರಾಜ್ಯ ದಲ್ಲಿ ಕಳ್ಳರ ಭೀತಿಯಿರದಿದ್ದರೂ ಗುಪ್ತಚಾರರ ಹೆದರಿಕೆಯಿತ್ತು !

ಆ ಸದ್ಗೃಹಸ್ಥನಿಗೆ ಹಲವುದಿವಸಗಳಿಂದಲೂ ತಲೆಯಲ್ಲಿ ಒಂದು ವಿಚಾರ ಮೂಡಿ ನಾಲಿಗೆಯ ಮೇಲೆ ಬರಲಾರದೆ ಕರಗಿಹೋಗುತ್ತಿತ್ತು. ಈಗ ಅವನು ಇದ್ದುದರಲ್ಲೆ ಧೈರ್ಯಮಾಡಿ ಆ ಗುಪ್ತಚಾರನನ್ನು ಬಳಿಗೆ ಕರೆದನು.

" ಅಲ್ಲಪ್ಪಾ, ರಾಮರಾಜ್ಯದಲ್ಲಿ ಹಗಲುಹೊತ್ತು ಬಾಗಿಲು ತೆರೆದಿಟ್ಟು ಹೋದರೂ ಒಂದು ಚಿಕ್ಕಾಸೂ ಕಳುವಾಗುವದಿಲ್ಲವೆಂದು ಖ್ಯಾತಿಯಿದೆ. ಮತ್ತೆ ನೀವೇಕೆ ರಾತ್ರಿಯೆಲ್ಲ ಗಸ್ತಿ ತಿಗುಗುತ್ತೀರಿ ?"

" ಹಗಲು ಹೊತ್ತು ಆಗಲಿಕ್ಕಿಲ್ಲರಿ. ರಾತ್ರಿಯ ಹೊತ್ತು ಎಷ್ಟೆಂದರೂ.... ಆದರೂ ಶ್ರೀರಾಮದೇವರ ಕಾಲದಲ್ಲಿ ಕಳು ಗಿಳು ಸಾಧ್ಯವೇ ಇಲ್ಲ ಬಿಡಿ "

" ಕಳವುಗಿಳವು ಇಲ್ಲದಿದ್ದರೆ ಮತ್ತೇಕೆ ಈ ಗಸ್ತಿ ಅಂತ ನಾನು ಕೇಳು ವದು "

" ಅದನ್ನೆಲ್ಲ ಕೇಳಬಾರದು ರಾಯರೇ. ಆದರೂ ನಿಮ್ಮ ಹತ್ತರ ಹೇಳದೆ ಯೇನು ? ಪ್ರಜೆಗಳು ತಮ್ಮ ವಿಷಯವಾಗಿ ಏನು ಮಾತಾಡಿಕೊಳ್ಳುತ್ತಾರೆಂದು ತಿಳಿಯಲು ನಮ್ಮನ್ನು ನೇಮಿಸಿದ್ದಾರೆ."

" ಅಂದರೆ ಪ್ರಜೆಗಳಲ್ಲಿ ಪ್ರಭುಗಳಿಗೆ ವಿಶ್ವಾಸವಿಲ್ಲವೆಂದಂತಾಯಿತಲ್ಲ !"

" ವಿಶ್ವಾಸವಿದೆ ಆದರೂ...."

" ಹಾಗಾದರೆ ನೀವು ಊರಿನ ಜನರು ಮಾತಾಡಿಕೊಳ್ಳುವುದನ್ನೆಲ್ಲ ದೇವ ರಿಗೆ ವರದಿ ಮಾಡುತ್ತೀರಿ. "

" ನಾವಿರುವದು ಅದಕ್ಕಾಗಿಯೇ ರಾಯರೇ "

" ಸೀತಾಮಾತೆಯನ್ನು ಅಷ್ಟುವರ್ಷ ರಾವಣನ ವಶದಲ್ಲಿ ಬಿಟ್ಟಿದ್ದು ನಂತರ ಮತ್ತೆ ಅವರೊಡನೆ....ಊರೆಲ್ಲ ಗುಜು ಗುಜು ನಡಿಸುತ್ತಿರುವ ಸಂಗತಿ ನಿಮಗೆ ಗೊತ್ತಿರಬಹುದು."

" ಗೊತ್ತಿದೆ ರಾಯರೇ. ಕಳೆದ ೨೫ ದಿನಗಳಿಂದಲೂ ಕೇಳುತ್ತಿದ್ದೇವೆ. ಆದರೆ ಇದನ್ನು ಹೇಗೆ ತಿಳಿಸುವದು ದೇವರಿಗೆ ? **ನಿಮ್ಮಂಥ ಸದ್ಗೃಹಸ್ಥರೇ ಹೀಗೆ ಹೇಳುತ್ತಾರೆಂದರೆ ಪ್ರಭುಗಳು ನಂಬಬೇಕಲ್ಲ !** ಆದ್ದರಿಂದ— ನಿಮ್ಮ ಹತ್ತರ ಹೇಳದೆಯೇನು ? ಯಾರಾದರೂ ಸಾಮಾನ್ಯರು ಈ ವಿಷಯ ವನ್ನು ಎತ್ತಲಿ; ಅವರನ್ನೊಯ್ದು ಪ್ರಭುಗಳಿಗೊಪ್ಪಿಸುವ ಎಂದಿದ್ದೇವೆ."

ಆ ಸದ್ಗೃಹಸ್ಥನ ಸಂಶಯ ನಿವಾರಣೆಯಾಗಿ ಅವನು " ವಹವ್ವಾ " ಅಂದುಕೊಂಡು ಒಳಗೆ ನಡೆದನು.

ಮಾರನೆಯ ದಿನ ಅಗಸನೊಬ್ಬನು ಇದೇ ವಿಷಯವನ್ನೆತ್ತಿ ನುಡಿಯಲು ಆ ಗುಪ್ತಚಾರನು ಅಗಸನ ಹೆಸರನ್ನೂ ಆ ವಾರ್ತೆಯನ್ನೂ ಶ್ರೀರಾಮಚಂದ್ರ ದೇವರಿಗೊಯ್ದು ಮುಟ್ಟಿಸಿ ಧನ್ಯನಾದನು.

---

# ಹನುಮನ ಶಾಪ

ಸೀತಾದೇವಿಗೆ ಲವಕುಶರನಂತರ ಮಕ್ಕಳಾಗಲೇ ಇಲ್ಲವೆ ? ಪುರಾಣ ದಲ್ಲಿ ಅವಳಿಗೆ ತದನಂತರ ಪತಿಯ ಸಮಾಗಮ ಲಭಿಸಲಿಲ್ಲವೆಂದೇನೋ ಹೇಳಿದೆ. ನನ್ನ ಕತೆ ಮಾತ್ರ ಹೀಗಿದೆ.

" ಹಿಂದಕ್ಕೆ ನಾವು ವನವಾಸದಲ್ಲಿದ್ದಾಗ ನಮ್ಮ ಕುಟೀರದ ಎದುರಿಗೆ ಒಂದು ಮಲ್ಲಿಗೆ ಬಳ್ಳಿಯನ್ನು ಬೆಳೆಯಿಸಿದ್ದೆ, ನೆನಪಿದೆಯೇ ನಿಮಗೆ ? "

" ಈಗ ಅದರ ನೆನಪೇಕಾಯಿತೋ ದೇವಿಗೆ ! "

" ಆ ಬಳ್ಳಿಯ ಹೂವಿನ ಕಂಪಿನ ಸಮಾನವಾದುದು ಅಯೋಧ್ಯೆಯಲ್ಲಿ ನನಗೆ ಯಾವುದೂ ಸಿಗಲಿಲ್ಲ. ಅದೇ ಬಳ್ಳಿಯ ಹೂಗಳನ್ನು ತರಿಸಿಕೊಳ್ಳ ಬೇಕೆಂದು ಮನಸ್ಸಾಗಿದೆ. "

" ವ್ಹ ! ಒಳ್ಳೆಯ ಬಯಕೆ. ಆ ಬಳ್ಳಿ ಈಗ ಅದೆಯೋ ಒಣಗಿದೆಯೋ ಯಾರು ಬಲ್ಲರು ? "

" ಒಣಗಿರಲಾರದು "

" ಒಣಗಿರದಿದ್ದರೂ ತರುವದು ಸುಲಭವಲ್ಲ. ಕಾಂಚನಮೃಗ ಬೇಕೆಂದು ನೀನು ಹಟ ಹಿಡಿದಾಗ ಎಷ್ಟು ಫಜೀತಿಯಾಯಿತು ನೋಡು ! ಮತ್ತೆ ನೀನು ಇಂತಹ ಬಯಕೆಯನ್ನು ಮಾಡುವದನ್ನು ನೋಡಿದರೆ........ "

ಸೀತಾದೇವಿಯು ನಾಚಿಕೆಯಿಂದ ತಲೆವಾಗಿದಳು. ಶ್ರೀ ರಾಮಚಂದ್ರ ದೇವನು ದಿವ್ಯಚಕ್ಷುವಿನಿಂದ ತನ್ನ ಪತ್ನಿಯು ಗರ್ಭವತಿಯೆಂಬುದನ್ನು ಕೂಡಲೆ ತಿಳಿದುಕೊಂಡುಬಿಟ್ಟನು !

" ಹಾಗಿದ್ದರೆ ನಿನ್ನ ಬಯಕೆಯನ್ನು ಈಡೇರಿಸಿ ಕೊಡಲೇಬೇಕಾಯಿತು." ಅಂದವನೇ ಹನುಮಂತನನ್ನು ಕರೆದು ಪಂಚವಟಿಯ ಕುಟೀರದ ಎದುರಿನ ಮಲ್ಲಿಗೆ ಬಳ್ಳಿಯಿಂದ ಒಂದು ಬೊಗಸೆ ಹೂ ತರಲು ಆಜ್ಞಾಪಿಸಿದನು. ಸೀತಾ ದೇವಿಯು ಪತಿದೇವನ ಈ ಪತ್ನಿ ಭಕ್ತಿಗೆ ಹಿಗ್ಗಿದಳು.

× × × ×

ಹನುಮಂತನು ಎಷ್ಟು ಹುಡುಕಿದರೂ ಆ ಮಲ್ಲಿಗೆಯ ಬಳ್ಳಿ ಕಾಣಲಿಲ್ಲ. ತಾನೇ ಎಷ್ಟೋಸಲ ನೀರೆರೆದ ಬಳ್ಳಿ ತನಗೇ ಕಾಣುವದಿಲ್ಲವಲ್ಲ ಎಂದು ಅವನು ಮಿಡುಕಿದನು. ಕಟ್ಟಕಡೆಗೆ ಅದು ಬತ್ತಿರಲು ಸಾಕೆಂದು ಅವನಿಗೆನಿಸಿತು. ಈ ವಿಚಾರ ದೇವದೇವಿಯರಿಗೆ ಹೊಳೆದಿರಲಿಕ್ಕಿಲ್ಲವೇ ಎಂದು ಅವನು ಪ್ರಶ್ನಿಸಿ ಕೊಂಡನು.

ಕೊನೆಗೆ ಬರಿಗೈಯಲ್ಲಿ ಮರಳಬೇಕಾಯಿತು.

ಮಲ್ಲಿಗೆ ಬಾರದುದನ್ನು ಕಂಡು ಸೀತಾದೇವಿಯು ಕಣ್ಣೀರು ಹಾಕಿ ದಳು. ಪತ್ನಿಯ ಕಂಬನಿಯನ್ನು ಕಂಡು ಶ್ರೀರಾಮಚಂದ್ರ ದೇವನು ತನ್ನ ಕಣ್ಣಿನಿಂದ ಹನುಮಂತನ ಮೇಲೆ ಕೆಂಡಕಾರಿದನು. " ಸರಿಯಾಗಿ ಹುಡು ಕಲೇ ಇಲ್ಲ ನೀನು. ಇನ್ನೊಮ್ಮೆ ಹೋಗಿ ಸಂಶೋಧಿಸಿಕೊಂಡು ಬಾ " ಎಂದು ಆಜ್ಞೆಯಾಯಿತು.

" ಸ್ವಾಮಿಯಾಜ್ಞೆಯನಾಂತು ಹನುಮ ನಿಜಶಿರದೆ " ಮತ್ತೊಮ್ಮೆ ಪಂಚ ವಟಿಗೆ ಜಿಗಿದನು. ಪುನಃ ಗಿಡಗಿಡ, ಬಳ್ಳಿಬಳ್ಳಿಗಳನ್ನೆಲ್ಲ ಮುಟ್ಟಿ ಮುಟ್ಟಿ ಮೂಸಿ ಮೂಸಿ ನೋಡಿದನು. ಆದರೆ ಆ ಮಲ್ಲಿಗೆಯ ಬಳ್ಳಿ ಸಿಗಲಿಲ್ಲ.

ಕೆಟ್ಟಮೋರೆಮಾಡಿಕೊಂಡು ಬಂದು ದೇವದೇವಿಯರಿಗೆರಗಿ ಕುಳಿತನು. ಎರಡು ಸಲ ಹಾರಿದ ಶ್ರಮದಿಂದ ಆತನು ನಿರ್ವಿಣ್ಣನಾಗಿದ್ದನು.

ಈ ಸಲವೂ ಖಾಲಿಯಾದುದನ್ನು ತಿಳಿದು ಸೀತಮ್ಮನವರು ಮೂರ್ಛೆ ಹೋದರು. ಅದನ್ನು ನೋಡಿ ಶ್ರೀರಾಮಚಂದ್ರ ದೇವನು ಎದುರು ಕುಳಿತ ಮಾರುತಿಯು ರಾವಣನೆಂಬಂತೆ ವರ್ತಿಸಿದನು.

" ಆ ಮಲ್ಲಿಗೆ ಸಿಗದಿದ್ದರೆ ಬೇರೆ ಯಾವದಾದರೊಂದು ಮಲ್ಲಿಗೆಯನ್ನು, ಮಲ್ಲಿಗೆಯೇ ಸಿಗದಿದ್ದರೆ ಮತ್ತಾವದಾದರೊಂದು ಹೂವನ್ನು ತರಬಾರದಿತ್ತೇ ಕಪಿಯೇ ?" ಎಂದು ಗುಡುಗಿದನು ಸೀತಾಪತಿ.

ಹನುಮಂತನಿಗೆ ಬಹಳ ಅಪಮಾನವಾಯಿತು. " ಹಾಗೆಯೇ ಆಗಲಿ " ಎಂದು ಮೂರನೆಯಸಲ ಪಂಚವಟಿಗೆ ಹಾರಿದನು. ಹಸಿವೆ, ಶ್ರಮಗಳಿಂದ ಬಳಲಿದ ಆತನಲ್ಲಿ ಆ ಮಲ್ಲಿಗೆ ಬಳ್ಳಿಯು ಸತ್ತಿದ್ದರೂ ಚಿಗುರಿಸಿ ಅದರ ಹೂವನ್ನೇ ತರಬೇಕೆಂಬ ಹಟಮೂಡಿತು.

ಬತ್ತಿ ಚೆಂಡಾದ ಆ ಬಳ್ಳಿಯ ಅವಶೇಷ ಸಿಗುವುದರೊಳಗಾಗಿ ಆತನಿಗೆ ಒವಳಿ ಬರುವಂತಾಯಿತು. "ಇಂಥ ಬಯಕೆ ಯಾಗುವುದಕಿಂತ ಬಸಿರೇ...." ಎಂದು ಅವನ ಬಾಯಿಯಿಂದ ಹೊರಟುಬಿಟ್ಟಿತು.

ಕಂಬನಿಯಿಂದ ಆ ಬಳ್ಳಿಯನ್ನು ಚಿಗುರಿಸಿ ಅದರ ಮೊಗ್ಗೆಯನ್ನು ಹಿಡಿದು ಮಾರುತಿಯು ಬಂದನು. ಅವನು ಬರುವುದರೊಳಗಾಗಿ ಅವನು ನೊಂದು ನುಡಿದಂತೆ ಗರ್ಭಪಾತವಾಗಿ ಬಿಟ್ಟಿತ್ತು.

ಸೀತೆ ಮತ್ತೆ ಬಸುರಿಯಾಗಲೇ ಇಲ್ಲ.

# ಶ್ರೀರಾಮ ಜ್ಞಾನೋದಯ

ಒಮ್ಮೆ ಶ್ರೀರಾಮಚಂದ್ರನು ಸಿಂಹಾಸನಾರೂಢನಾಗಿರಲು ಅವನ ಸೇವಕರು ಒಬ್ಬನನ್ನು ಹಿಡಿದು ತಂದೊಪ್ಪಿಸಿ ಬಿನ್ನವಿಸಿದರು. " ಪ್ರಭೂ, ಈ ಪ್ರಾಣಿಯು ಒಂದು ಮರಕ್ಕೆ ಹಗ್ಗ ಕಟ್ಟಿ ಉರುಲು ಹಾಕಿಕೊಂಡು ಆತ್ಮಹತ್ಯೆ ಮಾಡಿಕೊಳ್ಳಲು ಯತ್ನಿಸುತ್ತಿದ್ದನು. ನಾವು ಕಂಡು ಹಿಡಿದು ತಂದಿದ್ದೇವೆ. ಆತ್ಮಹತ್ಯೆಯಂಥ ಘೋರ ಪಾಪವನ್ನೆಸಗಲು ಉದ್ಯುಕ್ತನಾದ ಈ ದುಷ್ಟನಿಗೆ ದೇವರು ಯೋಗ್ಯ ಶಿಕ್ಷೆ ವಿಧಿಸಬೇಕು."

ಇದನ್ನು ಕೇಳಿ ಶ್ರೀರಘುರಾಮನು ದುಃಖಿತನಾಗಿ " ಹೌದೇ ನೀನು ಆತ್ಮಹತ್ಯೆಗೆ ಯತ್ನಿಸಿದ್ದು ?" ಎಂದು ಕರುಣೆಯಿಂದ ಅವನನ್ನು ಕೇಳಿದನು. ಆತನು " ಹೌದು '' ಅಂದನು.

ರಘುಕುಲ ತಿಲಕನು ತೀರ್ಪುಕೊಟ್ಟನು : " ಆತ್ಮಹತ್ಯೆಯು ಮಹಾಪರಾಧವು. ನೀನು ಅಂದರೆ ನೀನಲ್ಲ. ನಿನ್ನೊಳಗೆ ಆತ್ಮವೊಂದಿದೆ. ನೀನು ಎನ್ನುವ ಈ ದೇಹದಲ್ಲಿ ಅದು ವಾಸಿಸುತ್ತಿದೆ. ಆ ಆತ್ಮವು ನನ್ನ ಪ್ರಜೆ. ನನ್ನ ಪ್ರೀತಿಯ ಪ್ರಜೆಯ ವಾಸಸ್ಥಾನವಾದ ನಿನ್ನ ಈ ದೇಹವನ್ನು ನೀನು ನಾಶಮಾಡಲು ಯತ್ನಿಸಿದಿ. ಆದ್ದರಿಂದ ನಿನಗೆ ದೇಹಾಂತ ಶಿಕ್ಷೆ ವಿಧಿಸಿದ್ದೇನೆ.

ಅಪರಾಧಿಗೆ ನಗು ತಡೆಯಲಾಗಲಿಲ್ಲ. ಆದರೆ ಸೇವಕರು ಬಂದು ಅವನನ್ನು ಎಳೆದುಕೊಂಡು ಹೋದರು.

ಸಾಯುವ ಮುಂಚೆ ಸಹ ತನ್ನ ಪ್ರಜೆಯು ನಕ್ಕನೆಂದು ಶ್ರೀರಾಮಚಂದ್ರನು ಒಳಗೊಳಗೇ ಹಿಗ್ಗಿದನು.

ಈ ಸಂಗತಿಯನ್ನು ಕೇಳಿ ಪ್ರಜೆಗಳೆಲ್ಲ ಏನೇನೋ ಗುಜು ಗುಜುಗುಡ ಹತ್ತಿದರು. ಒಬ್ಬ ಅಗಸನು ಮಾತ್ರ ತನ್ನ ಕತ್ತೆಯ ಮೇಲೆ ಕುಳಿತು ಅರಮನೆಗೆ ಬಂದು ಶ್ರೀರಾಮಚಂದ್ರನನ್ನು ಕಂಡು " ಆತ್ಮಹತ್ಯೆಗೆ ಯತ್ನಿಸಿದ—ತಾವು ದೇಹಾಂತ ಶಿಕ್ಷೆವಿಧಿಸಿದ—ಆ ಪಾಪಿಗೆ ಆತ್ಮಹತ್ಯೆಯನ್ನೇಕೆ ಮಾಡಿಕೊಳ್ಳ

ಲೆಳೆಸಿದಿ ?" ಎಂದು ಪ್ರಭುಗಳು ಕೇಳಿದಿರಾ ? ಎಂದು ಧೈರ್ಯದಿಂದ ಪ್ರಶ್ನಿಸಿ ಹೊರಟು ಹೋದನು.

ಶ್ರೀರಾಮಚಂದ್ರನ ತಲೆಯಲ್ಲಿ ವಿದ್ಯುತ್ ಸಂಚಾರವಾದಂತಾಗಿ ಅವನು ಬೆರಳಿನ ಮೇಲೆ ಮೂಗು ಹೇರಿದನು. "ಆತ್ಮಹತ್ಯೆ ಅಪರಾಧ—ಆತ್ಮ—ಪ್ರಜೆ—ಈ ವಿಚಾರದಲ್ಲಿ ಸಿಲುಕಿದ ನನಗೆ 'ಆತ್ಮಹತ್ಯವೇಕೆ ?' ಎಂದು ಕೇಳುವ...."

ಸಿಂಹಾಸನದಿಂದಿಳಿದು ಕತ್ತೆ ಸಹಿತ ಆ ಅಗಸನನ್ನು ಒಳಗೆ ಕರೆಯಿಸಿ ಕೈ ಕೈ ಕುಲುಕಿ "ಸಾಮ್ರಾಜ್ಯವನ್ನು ತೂಗಿಸಿಕೊಂಡು ಹೋಗುವಾಗ ಎಷ್ಟೋ ಸೂಕ್ಷ್ಮ ವಿಚಾರಗಳು ಹೊಳೆಯದೆ ಹೋಗಿ ಅನ್ಯಾಯವಾಗುವದುಂಟು. ಆಗ ಪ್ರಜೆಯು—ನಿಜವಾದ ಪ್ರಜೆಯು—ಸಂಕೋಚಪಟ್ಟುಕೊಳ್ಳದೆ, ರಾಜರು ಏನೆಂದಾರೋ ಎಂದು ಹೆದರದೆ ನಿನ್ನಂತೆ ಧೈರ್ಯದಿಂದ ಬಂದು ನುಡಿಯಬೇಕು. ನನ್ನ ರಾಜ್ಯವನ್ನು ಒಂದು ಆದರ್ಶ ರಾಜ್ಯವನ್ನಾಗಿ ಮಾಡಬೇಕೆಂಬ ಹಂಬಲ ವಿದೆ. ಇದಕ್ಕಾಗಿ ನಿನ್ನಂಥ ಪ್ರಜೆಯ ಅಭಿಪ್ರಾಯ ನನಗೆ ಅಗತ್ಯ. ನಾನು ಕೇಳದೆಯೇ ಅದು ಬರಬೇಕು. ನೀನು ನನ್ನ ಪ್ರಥಮ ಪ್ರಜೆ....ಇರಲಿ ನಿನ್ನ ಹೆಸರು ?"

" .... .... .... .... ...."

" ಓಹೋ ! ಸೀತಾದೇವಿಯ ಸತೀತ್ವದ ಅಗ್ನಿಪರೀಕ್ಷಕನೇ ನೀನೋ !! ( ನೀನಿಲ್ಲದಿದ್ದರೆ ಅವಳ ಕೀರ್ತಿ ಇಷ್ಟು ಹಬ್ಬುತ್ತಿದ್ದಿಲ್ಲ ) ಇಂದಿನಿಂದ ನೀನು ಇಲ್ಲೇ ಇರು. ನಿನ್ನ ಈ ವಾಹನವು ಅಶ್ವಸಾಲೆಯಲ್ಲಿರಲಿ."

